# ಶಿಲ್ಪಬ್ರಹ್ಮ
# ಸಿ. ಪರಮೇಶ್ವರಾಚಾರ್ಯ

ಡಾ॥ ಅ. ಲ. ನರಸಿಂಹನ್




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**
ಮೊದಲನೇ ಮಹಡಿ, ರವೀಂದ್ರ ಕಲಾಕ್ಷೇತ್ರ
ಜೆ. ಸಿ. ರಸ್ತೆ, ಬೆಂಗಳೂರು–560 002

**SHILPA BRAHMA C. PARAMESWARACHARYA :**
A Biography By : Dr. A. L. Narasimhan
Published by N. Marishamachar, Registrar
Karnataka Shipakala Academy
I Floor, Ravindrakalakshetra, J. C. Road
Bangalore - 560 002

ಮೊದಲ ಮುದ್ರಣ : 1998

ಪ್ರತಿಗಳು : 1000

*ಸಂಪಾದಕ :*
**ಎನ್. ಮರಿಶಾಮಾಚಾರ್**

ಬೆಲೆ : ರೂ. **15-00**

ಮುಖಚಿತ್ರ ವಿನ್ಯಾಸ : **ಕೆ. ಮಕಾಳಿ**

ಮುದ್ರಕರು
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ
ಬೆಂಗಳೂರು-560 018



ಶಿಲ್ಪಬ್ರಹ್ಮ ಸಿ. ಪರಮೇಶ್ವರಾಚಾರ್ಯ

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು, 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪಶೈಲಿಗರು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ ರಚಿಸುವುದೇ ತಮ್ಮ ಕಾಯಕ'ವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ಪ್ರಥಮವಾಗಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ಶ್ರೀ ಸಿ. ಪರಮೇಶ್ವರಾಚಾರ್ಯ ಅವರ ಬಗ್ಗೆ ಡಾ|| ಅ. ಲ. ನರಸಿಂಹನ್‌ರು ಪುಸ್ತಕವನ್ನು ಬರೆದುಕೊಟ್ಟಿದ್ದಾರೆ. ಶ್ರೀಯುತರು ಶಿಲ್ಪಿಯ ಬಗ್ಗೆ ಚೆನ್ನಾಗಿ ಅರಿತಿದ್ದು, ಅವರ ಜೀವನ ಮತ್ತು ಕೃತಿಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಶ್ರೀಯುತರಿಗೆ ಅಕಾಡೆಮಿಯ ಪರವಾಗಿ ವಂದನೆಗಳನ್ನು ಸಲ್ಲಿಸುವೆ. ನಮ್ಮ ನಾಡಿನ ಜನರು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

1998
ಬೆಂಗಳೂರು

**ಕೆ. ಶಾಮರಾಯ ಆಚಾರ್ಯ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಲೇಖಕರ ಮಾತು

ಶಿಲ್ಪಿ ಶ್ರೀ ಸಿ. ಪರಮೇಶ್ವರಾಚಾರ್ಯರ ಬಗ್ಗೆ ಈ ಪುಟ್ಟ ಪುಸ್ತಿಕೆಯನ್ನು ಬರೆಯಲು ನಾನು ಸಾಕಷ್ಟು ಕಾಲಾವಕಾಶ ತೆಗೆದುಕೊಂಡೆ. ಅದಕ್ಕೆ ಮುಖ್ಯಕಾರಣ ಆಚಾರ್ಯರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿದಂತೆಲ್ಲಾ ಅವರು ಇನ್ನೂ ಆತ್ಮೀಯರಾಗುತ್ತಾ ಹೋದರು. ಅವರನ್ನು ಸಂದರ್ಶಿಸತೊಡಗಿದಾಗಲೆಲ್ಲ ಅದು ಗಡಿ ಮೀರಿ ಶಿಲ್ಪ, ವಾಸ್ತುಶಿಲ್ಪಗಳ ಚರ್ಚೆಯುತ್ತ ತಿರುಗುತ್ತಿತ್ತು. ಶಿಲ್ಪಕಲೆಯ ನನ್ನ ಅನೇಕ ಸಂದೇಹಗಳಿಗೆ ಅವರ ನೀಡುತ್ತಿದ್ದ ಸುಧೀರ್ಘ ಉತ್ತರಗಳಿಂದಾಗಿ ಮತ್ತು ಅದು ಎಂದೆಂದೂ ಅಪೂರ್ಣವಾಗಿಯೇ ಉಳಿಯುತ್ತಿದ್ದುದಾಗಿ ಬರವಣಿಗೆಗೆ ಬೇಕಾದ ವಿಷಯ ಸಂಗ್ರಹ ತಡವಾಗುತ್ತಿತ್ತು. ಹೊಯ್ಸಳರ ದೇವಾಲಯಗಳ ಕಂಬಗಳು ಗಡಚಿ (ಲೇತ್)ಯಿಂದ ತಿರುಗಿಸಿ ಮಾಡಿದ್ದೆಂಬ ನನ್ನ ಅನುಮಾನಕ್ಕೆ ಅವರು ಇಂದಿಗೂ ಆ ಬಗೆಯ ಪದ್ಧತಿ ಇರುವ ಬಗ್ಗೆ ಚಿತ್ರ ಸಮೇತ ವಿವರಿಸಿ ತೋರಿಸಿದರು. ಅವು ತತ್ಕಾಲದ ಒಂದು ಉಪಕರಣವಾಗಿದ್ದು ಹಳೆಯವು ಉಳಿದು ಬಾರದ ಬಗ್ಗೆ ವಿವರಿಸಿದರು. ಅಂತೆಯೇ ನಾಗರ, ವೇಸರ, ದ್ರಾವಿಡ ವಾಸ್ತುಶಿಲ್ಪಗಳಲ್ಲಿಯ ವ್ಯತ್ಯಾಸ, ಶೈಲಿಗಳ ಪ್ರಬೇಧ, ಮಾಧ್ಯಮಗಳಲ್ಲಿಯ ಸಾಧ್ಯಾಸಾಧ್ಯತೆ, ಆಗಮಗಳಲ್ಲಿರುವ ಭಿನ್ನತೆ ಇತ್ಯಾದಿ ಅನೇಕ ವಿಷಯಗಳು ನಮ್ಮ ಚರ್ಚೆಯ ವಿಷಯಗಳಾಗಿರುತ್ತಿತ್ತು.

ಒಂದೇ ದೈವದ ಶಿಲ್ಪದಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳು ಬೇರೆಯದೇ ಮೂರ್ತಿಯಾಗುತ್ತಿತ್ತು. ಎರಡರ ಬದಲು ನಾಲ್ಕು ಕೈಗಳು ಇದ್ದಲ್ಲಿ; ಅದಕ್ಕಿಂತ ರೂಪ ಒಂದೇ ಆಗಿ ವಾಹನ, ಅಥವಾ ಆಯುಧ ಅಥವ ಹಿನ್ನೆಲೆ - ಮುನ್ನೆಲೆ ಇತ್ಯಾದಿಗಳಲ್ಲಿ ಆಗಬಹುದಾದ ಸೂಕ್ಷ್ಮ ವತ್ಯಾಸಗಳು ಹೇಗೆ ಬೇರೆ ಇನ್ನೊಂದೇ ಮೂರ್ತಿಶಿಲ್ಪವಾಗುತ್ತದೆ ಎಂಬ ಬಗ್ಗೆ ಆಚಾರ್ಯರು ಆಗಮೋಕ್ತವಾಗಿ ವಿವರಣೆ ನೀಡುತ್ತಿದ್ದರು.

ಮೂರ್ತಿಲಕ್ಷಣಗಳ ವಿಷಯ ಬಂದರಂತೂ ಆಚಾರ್ಯರಿಗೆ ಹೊಸ ಹುರುಪು ಬರುತ್ತಿತ್ತು. ಅದು ಅಘೋರೇಶ್ವರವಾಗಲೀ, ರಾಜ ಮಾತಂಗಿಯಾಗಲೀ, ನಟರಾಜನಾಗಲೀ, ತಾಂಡವೇಶ್ವರನಾಗಲೀ ಧ್ಯಾನಶ್ಲೋಕಗಳನ್ನು ಸುಧೀರ್ಘವಾಗಿ ನಿರಾಯಾಸವಾಗಿ ಹೇಳಿ ಅರ್ಥಸಮೇತ ವಿವರಿಸುತ್ತಿದ್ದರು. ಹೀಗಾಗಿ ಅವರು ಆತ್ಮೀಯ ಗೆಳೆಯರಂತಾಗಿದ್ದು ಪದೇ ಪದೇ ಅವರಲ್ಲಿ ಹೋಗುವಂತೆ, ತಡೆ ರಹಿತವಾಗಿ ಮಾತಾಡುವಂತೆ ಮಾಡಿತು. ಅವರೆಂದೂ ಚಿತ್ರ, ಶಿಲ್ಪ, ವಾಸ್ತು ಶಿಲ್ಪಗಳಿಂದ ಹೊರತಾಗಿ ಯಾವ ಮಾತೂ ಆಡುವುದಿಲ್ಲ. ಉಳಿದ ವಿಷಯಗಳು ಅವರಿಗೆ ಅಷ್ಟು ಅವಶ್ಯವೂ ಅಲ್ಲ.

ಎರಡನೆಯದಾಗಿ ಆಚಾರ್ಯರು ಯಾವುದೇ ದಾಖಲೆಯನ್ನು ವ್ಯವಸ್ಥಿತವಾಗಿ ಇರಿಸಿಲ್ಲದಿರುವುದು. ಅವರ ಬಗ್ಗೆಯ ಒಂದೆರಡು ಲೇಖನಗಳು ಕೆಲವು ಪತ್ರಿಕಾ ತುಣುಕುಗಳು, ದೂರದರ್ಶನ ಹಾಗೂ ಆಕಾಶವಾಣಿಯ ಒಂದೆರಡು ಸಂದರ್ಶನಗಳ ವಿನಾ ಬೇರೆ ಯಾವುದೇ ಆಕರದೊರೆಯಲಿಲ್ಲ. ಈ ವರೆಗೆ ಅವರು ರಚಿಸಿದ ಕೃತಿಗಳು, ಅವುಗಳ ಮಾಧ್ಯಮ ಇಂದು ಅವು ಎಲ್ಲಿದೆ ಎಂಬ ವಿವರ ತಿಳಿಯಲಾಗಲಿಲ್ಲ. ಅಂತೆಯೇ ಅವರು ಭಾಗವಹಿಸಿದ ಶಿಬಿರಗಳು, ನೀಡಿದ ಪ್ರಾತ್ಯಕ್ಷಿಕೆ, ನಡೆದ ಸನ್ಮಾನ, ಪಡೆದ ಬಹುಮಾನ ಯಾವುದರ ಬಗ್ಗೆಯ ಆಚಾರ್ಯರು ಯಾವುದೇ ದಾಖಲೆ ಇರಿಸಿಲ್ಲ. ಈ ಬಗ್ಗೆ ಹುಡುಕಲು ಪಟ್ಟಿಯನ್ನು ಪೂರ್ಣಗೊಳಿಸಲು ಕಾಲವ್ಯಯಮಾಡಿ ನಿರಾಶನಾದೆ. ಆ ಮಟ್ಟಿಗೆ ಈ ಪುಸ್ತಕದಲ್ಲಿರುವ ಪಟ್ಟಿಗಳು ಅಪೂರ್ಣವೆಂದೇ ಹೇಳಬೇಕು. ಕನಿಷ್ಟ ಆಚಾರ್ಯರು ರಚಿಸಿದ ಕೃತಿಗಳ ಬಗ್ಗೆಯಾದರೂ ಒಂದು ಪೂರ್ಣಪಟ್ಟಿ ಸಿದ್ಧಮಾಡಬೇಕೆಂದಿದ್ದ ನನ್ನ ಕಾರ್ಯ ಕೈಗೂಡಲಿಲ್ಲ.

ಈ ಪುಸ್ತಕದ ರಚನೆಯಿಂದಾಗಿ ಪರಮೇಶ್ವರಾಚಾರ್ಯರ ಪರಿಚಯವಾದುದು ಒಂದು ದೊಡ್ಡ ಲಾಭ. ಅವರ ಆತ್ಮೀಯತೆಗೆ, ಸಹೃದಯತೆಗೆ ಮಾರುಹೋಗಿದ್ದೇನೆ. ಇಲ್ಲಿರುವ ವಿವರಗಳಿಂದ ಆಚಾರ್ಯರ ಬಗ್ಗೆ ಪೂರ್ಣ ಕಲ್ಪನೆ ಬರಲಾರದು. ಕಾರಣ ಇಂದಿಗೂ ಅವರು ಕ್ರಿಯಾಶೀಲರಾಗಿದ್ದಾರೆ. ಕಲಾಕೃತಿ ರಚನಕಾರರಾಗಿದ್ದಾರೆ. ಅವರ ಕೃತಿಗಳಿಗೆ ಸಾಕಷ್ಟು ಬೇಡಿಕೆಯಿದೆ. ಪುಸ್ತಕದಲ್ಲಿ ಬಿಟ್ಟಿರಬಹುದಾದ ಸಂಗತಿಗಳೆಲ್ಲ ಸೇರಿಸಿ ಪರಿಪೂರ್ಣವಾದ ಗ್ರಂಥ ಹೊರಬರಲು ಈ ಪುಸ್ತಕ ನಾಂದಿಯಾಗಲಿ ಎಂದು ಆಶಿಸುತ್ತೇನೆ.

ಈ ಪುಸ್ತಕ ಬರೆಯಲು, ಅದಕ್ಕಿಂತ ಆಚಾರ್ಯರಂಥಹ 'ಆಚಾರ್ಯ ಪುರುಷ'ರ ಪರಿಚಯ, ಸ್ನೇಹ, ಇತ್ಯಾದಿಗಳು ದೊರಕುವಂತಾಗಲು ಕಾರಣ ಕರ್ತರಾದ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷ ಶ್ರೀ ಶಾಮರಾಯ ಆಚಾರ್ಯ ಹಾಗೂ ಸದಸ್ಯರಿಗೆ ತನ್ನ ಕೃತಜ್ಞತಾ ಪೂರ್ವಕ ವಂದನೆಗಳು. ಇಪ್ಪತ್ತಕ್ಕೂ ಹೆಚ್ಚು ವರ್ಷಗಳಿಂದ ಗೆಳೆಯರಾಗಿರುವ ನನ್ನ ಬರಹಗಳಿಗೆಲ್ಲಾ ಒತ್ತಾಸೆಯಾಗಿರುವ ರಿಜಿಸ್ಟ್ರಾರ್ ಶ್ರೀ ಮರಿಶಾಮಾಚಾರ್ ಅವರಿಗೂ ನನ್ನ ನಮನಗಳನ್ನು ಈ ಮೂಲಕ ಸಲ್ಲಿಸುತ್ತೇನೆ.

ಯಥಾಪ್ರಕಾರ ನಮ್ಮ ತೃಪ್ತಿಗೆ ಅನುಗುಣವಾಗುವಂತೆ ಮುದ್ರಣಕಾರ್ಯ ನಿರ್ವಹಿಸಿದ ಲಕ್ಷ್ಮಿಮುದ್ರಣಾಲಯದ ಶ್ರೀ ಅಶೋಕ್ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ವಂದನೆಗಳು.

ಬೆಂಗಳೂರು
1998

**ಅ. ಲ. ನರಸಿಂಹನ್**

## ಚತುರ್ಭುಜ ಬನಶಂಕರಿ

ವಾಮೆ ಡಮರುಗಂ ಪಾತ್ರಂ ಶೂಲಂ ಖಡ್ಗಂ ಚ ದಕ್ಷಿಣೆ
ಮುಕ್ತಾ ರತ್ನ ಸಮಾಯುಕ್ತಾಮಿಂದ್ರ ನೀಲ ಸಮಪ್ರಭಾಂ
ಚತುರ್ಭುಜಾಂ ವಿಶಾಲಾಕ್ಷೀಂ ಸೌಮಿ ಶಾಖಾಂಬರೀಂ ಶಿವಾ
ಶಬ್ಧ ಬ್ರಹ್ಮ ಮಾಯಾಂದೇವೀಂ ಸರ್ವಾಭರಣ ಭೂಷಿತಾಂ

ವೇದಾಧ್ಯಯನಂ ಶಿಲ್ಪಂ ಅಸ್ಯ ವೈದಿಕಃ। ಶಿಲ್ಪಾ ಧ್ಯಯಿನಂ ಶಿಲ್ಪಂ ಅಸ್ಯ ಶಿಲ್ಪಿಕಃ॥

ತರ್ಕಾಧ್ಯಯನಂ ಶಿಲ್ಪಂ ಅಸ್ಯ ತಾರ್ಕಿಕಃ। ವೀಣಾವಾದನಂ ಶಿಲ್ಪಂ ಅಸ್ಯ ವೈಣಿಕಃ॥

ಮೃದಂಗವಾದನಂ ಶಿಲ್ಪಂ ಅಸ್ಯ ಮಾರ್ಧಂಗಿಕಃ॥

# ಶಿಲ್ಪಬ್ರಹ್ಮ
# ಸಿ. ಪರಮೇಶ್ವರಾಚಾರ್ಯ

ಶಿಲ್ಪ ಕಲಾಕೋವಿದ ಸಿ. ಪರಮೇಶ್ವರಾಚಾರ್ ಅವರು, ಈ ಶತಮಾನದ ಕರ್ನಾಟಕದ ಪ್ರಮುಖ ಶಿಲ್ಪಿಗಳಲ್ಲಿ ಅಗ್ರಗಣ್ಯರು. ಈ ಅಭಿಪ್ರಾಯಕ್ಕೆ ಹಲವಾರು ನಿದರ್ಶನಗಳನ್ನು ನೀಡಬಹುದು. ಮುಖ್ಯವಾಗಿ ಹೇಳುವುದಾದರೆ ಮೈಸೂರಿನಲ್ಲಿ ನೆಲೆನಿಂತಿದ್ದ ನಮ್ಮ ಸಾಂಪ್ರದಾಯಿಕ ಶಿಲ್ಪಕಲೆಯನ್ನು ಬೆಂಗಳೂರಿಗೆ ಬರುವಂತೆ ಇಲ್ಲಿಂದ ದೇಶ ವಿದೇಶಗಳಲ್ಲಿ ಹರಡುವಂತೆ ಮಾಡಿದ ಶಿಲ್ಪ ಕಲಾವಿದರಲ್ಲಿ ಪರಮೇಶ್ವರಾಚಾರ್ಯರು ಪ್ರಮುಖರು. ಶಿಲ್ಪಕಲೆಯ ವಿವಿಧ ಪ್ರಕಾರಗಳಲ್ಲಿ ಮಾಧ್ಯಮಗಳಲ್ಲಿ, ಶೈಲಿಯಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿ ಅವೆಲ್ಲದರ ಸಾಧ್ಯಾಸಾಧ್ಯತೆಗಳನ್ನು ಕಂಡುಕೊಂಡವರು. ಸುಮಾರು ನಲವತ್ತು ವರ್ಷಗಳಿಂದ ಈಚೆಗೆ ಹಲವಾರು ಶೈಲಿಗಳಲ್ಲಿ ಸಂಕರಗೊಂಡಿದ್ದ ಕರ್ನಾಟಕ ಶಿಲ್ಪಕಲೆಯ ಮಿಶ್ರ ಪದ್ಧತಿಯನ್ನು ಬೇರ್ಪಡಿಸಿ ಶುದ್ಧ ರೂಪವೊಂದನ್ನು ನೀಡಿದವರು. ಸಂಪ್ರದಾಯ ಕಲಾಮನೆತನದಲ್ಲಿ ಜನಿಸಿ, ಆಧುನಿಕ ಪದ್ಧತಿಯಲ್ಲಿ ಅಭ್ಯಸಿಸಿ ಪ್ರಖ್ಯಾತ ಶಿಲ್ಪಕಲಾ ದಿಗ್ಗಜ, ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳ ಬಳಿಯಲ್ಲಿ ಶಾಸ್ತ್ರೋಕ್ತವಾಗಿ ಶಿಲ್ಪಕಲೆಯನ್ನು ಕಲಿತು, ಅವರ ಮಾರ್ಗ ದರ್ಶನದಲ್ಲಿ ಹಲವಾರು ಕಲಾಕೃತಿಗಳನ್ನು ರಚಿಸಿದವರು.

ಕ್ಷಣಕ್ಷಣವೂ, ಅಂಗುಲ ಅಂಗುಲವೂ ರಾಜಕೀಯದಿಂದಲೇ ತುಂಬಿ ತುಳುಕುತ್ತಿರುವ ವಿಧಾನಸೌಧದ ಒಳಹೊರಗೆ ಒಂದಿಷ್ಟು ಆಹ್ಲಾದಕರ ವಾತಾವರಣ, ಒಂದಿಷ್ಟು ಕಲಾತ್ಮಕತೆ ಮೂಡಿಸಿದವರಲ್ಲಿ ಪ್ರಮುಖ ಪಾತ್ರವಹಿಸಿದವರು ಪರಮೇಶ್ವರಾಚಾರ್ಯರು. ಕರಕುಶಲ ಕಲೆಯನ್ನು ಅಭಿವೃದ್ಧಿಪಡಿಸುವ, ಸರ್ಕಾರೀ ಸ್ವಾಮ್ಯದ ಇಲಾಖೆಯಲ್ಲಿ ಮೂರು ದಶಕಗಳ ಕಾಲ ಕಾರ್ಯನಿರತರಾಗಿದ್ದು, ದೇಶವಿದೇಶಗಳಲ್ಲಿ ನೂರಾರು ಶಿಲ್ಪಿಗಳನ್ನು, ಸಾವಿರಾರು ವರ್ಷಗಳ ಸಹಸ್ರಾರು ಶಿಲ್ಪ ಕಲಾ ಕೃತಿಗಳನ್ನು ತೀರಾ ಹತ್ತಿರದಿಂದ ಕಂಡು, ಅವನ್ನು ಅಭ್ಯಸಿಸುವ, ಆ ಕುರಿತು ತಿಳುವಳಿಕೆ, ಆಳವಾದ ಜ್ಞಾನ

ಪಡೆಯುವ ಅವಕಾಶವಾದುದು ಶ್ರೀಯುತರಿಗೆ ದೊರಕಿದ ದೊಡ್ಡ ಲಾಭ. ತಾವು ಕಲಿತದ್ದನ್ನು ಇದೇ ಅವಧಿಯಲ್ಲಿ ವರ್ಷವರ್ಷವೂ ವಿದ್ಯಾರ್ಥಿಗಳ ದೊಡ್ಡ ಸಮೂಹಕ್ಕೆ ಧಾರೆಯೆರೆದರು, ಅನೇಕಾನೇಕ ಸಸಿಗಳನ್ನು ನೆಟ್ಟು ಮರವಾಗಿ ಬೆಳಸಿ ಸಮಾಜಕ್ಕೆ ಫಲ ನೀಡುವಂತೆ ಮಾಡಿದವರು, ಮಾಡುತ್ತಿರುವವರು.

ಒಂದು ಮಾತಿನಲ್ಲಿ ಹೇಳುವುದಾದರೆ ಸಂಪ್ರದಾಯ ಶಿಲ್ಪ ಕಲೆಯ ಪುನರುಜ್ಜೀವನ ಮಾಡಿದವರು. ಅದಕ್ಕೆ ಕಾಯಕಲ್ಪ ನೀಡಿದವರೆಂದರೆ ಪರಮೇಶ್ವರಾಚಾರ್ಯರು. ಸಂಪ್ರದಾಯ ಕಲಾವಿದರು ಕಾಲಕಾಲದ ಕಲೆಯನ್ನು ಉಳಿಸಿ ಬೆಳೆಸುವುದು ಬೇರೆ. ಬೇರೆಯದೇ ಕುಟುಂಬ, ವೃತ್ತಿಗಳಿಂದ ಬಂದು ಕಲೆಯನ್ನು ತಳಹದಿಯಿಂದ ಕಲಿತು ತನ್ನ ಕಾಣಿಕೆಯನ್ನು ನೀಡುವುದು ಬೇರೆ. ಸಂಪ್ರದಾಯ ಶಿಲ್ಪಿ ತನ್ನ ಹಿಂದಿನ ಪರಂಪರೆಯನ್ನು ಹೊತ್ತುಕೊಂಡು ಬಂದು, ತನ್ನ ಕಾಲದ ತನ್ನ ಪಾಲಿನ ಕಾಣಿಕೆಯನ್ನು ಅದಕ್ಕೆ ಸೇರಿಸಿ, ಮುಂದಿನ ಪೀಳಿಗೆಗೆ ಏನು ಬೇಕೆಂದು ಅರಿತು ಆ ದಿಸೆಯಲ್ಲಿ ಮಾರ್ಗದರ್ಶನ ಮಾಡುವವನಾಗುತ್ತಾನೆ. ಮೂರು ತಲೆಮಾರುಗಳಿಗೆ ಕೊಂಡಿಯಂತಿರುತ್ತಾನೆ. ಈ ಮಾತು ಪ್ರಪಂಚದ ಎಲ್ಲ ಸಂಗತಿಗಳಿಗೂ ಅನ್ವಯಿಸಬಹುದಾದರೂ ಕಲೆಯ ದೃಷ್ಟಿಯಿಂದ ಮಹತ್ತರವಾದುದು.

ನಮ್ಮಲ್ಲಿ ಸಂಪ್ರದಾಯ ಶಿಲ್ಪಿಗಳು ಇರಲಿಲ್ಲ, ಅಥವ ಬರಲಿಲ್ಲ ಎಂದಲ್ಲ. 'ಶಿಲ್ಪಿ ಸಂಕುಲ'ವೇ ಇತ್ತು. ಒಂದು ಅರ್ಥದಲ್ಲಿ ಚಿತ್ರ ಕಲಾವಿದರಿಗಿಂತ ಶಿಲ್ಪ ಕಲಾವಿದರೇ ಅಧಿಕವಾಗಿದ್ದಾರೆ. ಆದರೂ ಶಿಲ್ಪ ಶಾಸ್ತ್ರದಲ್ಲಿ ಹೇಳಿರುವಂತೆ ಶಿಲ್ಪಿಯು ರೇಖಾಚಿತ್ರ, ವರ್ಣವಿನ್ಯಾಸ ಕಲಿತು ನಂತರ ಶಿಲ್ಪಾಕೃತಿಯನ್ನು ಕಡೆಯಬೇಕು ಎಂದಿದೆ. ಆದರೆ ಪರಮೇಶ್ವರಾಚಾರ್ಯರಿಗೆ ದೊರಕಿದಂತ ಅವಕಾಶ, ಬೇಡಿಕೆಯ ಕೃತಿಗಳಲ್ಲಿದ್ದ ವೈವಿಧ್ಯತೆ, ಜನಸಾಮಾನ್ಯ ರಿಂದ ಹಿಡಿದು ಕಲಾವಿದರು, ಕಲಾಕೃತಿ ಗ್ರಾಹಕರು, ಸಹೃದಯರು, ಕಲಾವಿಮರ್ಶಕರು ಮೊದಲಾದವರ ಸಂಪರ್ಕ ಇತ್ಯಾದಿಗಳಿಗೆ ಸ್ಪಂದಿಸಿ ಜೀವನವನ್ನು ತೆರೆದು ಕೊಳ್ಳುವ ಅವಕಾಶ ಉಳಿದ ಓರಗೆಯ, ಸಮಕಾಲೀನ ಶಿಲ್ಪಿಗಳಿಗಿಂತ ಪರಮೇಶ್ವರಾಚಾರ್ಯರಿಗೇ ಅಧಿಕವಾಗಿ ಬಂತೆಂದರೆ ತಪ್ಪಾಗಲಿಕ್ಕಿಲ್ಲ. ಹಾಗೆಂದೇ ಅವರು ವಿವಿಧ ರೀತಿಗಳಲ್ಲಿ ಗುರುತಿಸಲ್ಪಟ್ಟಿದ್ದಾರೆ. ಬಹುಮಾನಾದಿ ಪಾರಿತೋಷಕಗಳನ್ನು ಪಡೆದಿದ್ದಾರೆ. ಕೃತ-ಕೃತ್ಯರಾಗಿದ್ದಾರೆ.

ಚತುರ್ಭುಜ ಬನಶಂಕರಿ
ವಾಮೆ ಡಮರುಗಂ ಪಾತ್ರಂ ಶೂಲಂ ಖಡ್ಗಂ ಚ ದಕ್ಷಿಣೆ
ಮುಕ್ತಾ ರತ್ನ ಸಮಾಯುಕ್ತಾಮಿಂದ್ರ ನೀಲ ಸಮಪ್ರಭಾಂ
ಚತುರ್ಭುಜಾಂ ವಿಶಾಲಾಕ್ಷೀಂ ಸೌಮಿ ಶಾಖಾಂಬರೀಂ ಶಿವಾ
ಶಬ್ಧ ಬ್ರಹ್ಮ ಮಾಯಾಂದೇವೀಂ ಸರ್ವಾಭರಣ ಭೂಷಿತಾಂ

ವೇದಾಧ್ಯಯನ ಶಿಲ್ಪಂ ಅಸ್ಯ ವೈದಿಕಃ। ಶಿಲ್ಪಾಧ್ಯಯಿನಂ ಶಿಲ್ಪಂ ಅಸ್ಯ ಶಿಲ್ಪಕಃ ॥
ತರ್ಕಾಧ್ಯಯನಂ ಶಿಲ್ಪಂ ಅಸ್ಯ ತಾರ್ಕಿಕಃ। ವೀಣಾವಾದನಂ ಶಿಲ್ಪಂ ಅಸ್ಯ ವೈಣಿಕಃ।
ಮೃದಂಗವಾದನಂ ಶಿಲ್ಪಂ ಅಸ್ಯ ಮಾರ್ಧಂಗಿಕಃ ॥

## ಪರಂಪರೆ

ಪರಮೇಶ್ವರಾಚಾರ್ಯರ ಮೇಲೆ ಎಳವೆಯಲ್ಲಿ ನಡೆದ ಹಲವಾರು ಪ್ರಸಂಗಗಳು ಗಾಢವಾಗಿ ಪರಿಣಾಮ ಬೀರಿದ್ದೇ, ಅವರು ಶಿಲ್ಪಕಲೆಯನ್ನು ಸವಾಲಾಗಿ ಸ್ವೀಕರಿಸಿರುವಂತೆ ತೋರುತ್ತದೆ. ಶ್ರೀಯುತರನ್ನು ಆಗಾಗ್ಗೆ ಸಂದರ್ಶಿಸುವವರಲ್ಲಿ, ಆಪ್ತರಲ್ಲಿ, ಮಿತ್ರರಲ್ಲಿ ತಮ್ಮ ನೋವು, ನಲಿವುಗಳನ್ನು ಮುಕ್ತವಾಗಿ ಹಂಚಿಕೊಂಡಿದ್ದಾರೆ.

ಮೈಸೂರು ಅರಮನೆಯಲ್ಲಿ ಹೆಸರಾಂತ ಅನೇಕ ಕರಕುಶಲ ಶಿಲ್ಪಿಗಳು ಕೆಲಸಮಾಡುತ್ತಿದ್ದು ಅವರಲ್ಲಿ ಪರಮೇಶ್ವರಾಚಾರ್ಯರ ತಾತ ಲಿಂಗಣ್ಣಾ ಚಾರ್ಯ ಅವರೂ ಒಬ್ಬರು. ಅವರು ಶ್ರೀಗಂಧ ಮರದಲ್ಲಿ ಕುಸುರಿ ಕೆತ್ತನೆಯ ಕೆಲಸದಲ್ಲಿ ಪ್ರಸಿದ್ಧರಿದ್ದು ಅಂಬಾವಿಲಾಸ ಇತ್ಯಾದಿಕಡೆಗಳಲ್ಲಿ ಅವರ ಕೃತಿಗಳನ್ನು ಕಾಣಬಹುದು. ಸಿದ್ಧಲಿಂಗಸ್ವಾಮಿಗಳು ಅರಮನೆಯ ದರ್ಬಾರ್ ಹಾಲ್ ಹಾಗೂ ಕೌನ್ಸಿಲ್ ಹಾಲ್‌ಗಳ ಮೇಲ್ಛಾವಣಿಗೆ ವರ್ಣ ಸಂಯೋಜನೆ ಮಾಡಿದಾಗ ಆಚಾರ್ಯರ ಅಜ್ಜ ಅವರು ಸ್ವಾಮಿಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸಿದ್ದರು. ಮೈಸೂರು ಅರಮನೆಗೆ ಪೂನಾದಿಂದ, ಒಬ್ಬ ಶಿಲ್ಪಿ (ಲಕ್ಷ್ಮಣ್ ಕೃಷ್ಣ) ಅಧಿಕಾರಿಯಾಗಿ ಬಂದರೆಂದೂ, ಅವರು ಪಾಶ್ಚಾತ್ಯ ಶೈಲಿಯ ಖ್ಯಾತ ಶಿಲ್ಪಿಯೆಂದೂ, ಅವರ ಆದೇಶದಂತೆ ಹಳೆಯ ಕಾಲದ ಶಿಲ್ಪಿಗಳನ್ನೆಲ್ಲಾ ಕೆಲಸದಿಂದ ತೆಗೆದುಹಾಕಲಾಯಿತೆಂದೂ ಪರಮೇಶ್ವರಾಚಾರ್ಯರು ನೊಂದು ನುಡಿಯುತ್ತಾರೆ. ''ಆ ದಿನ ಅರಮನೆಯಿಂದ ಬಂದ ನಮ್ಮ ತಾತ ಉಪಕರಣ

ಗಳನ್ನೆಲ್ಲಾ ಮುಂದಿರಿಸಿಕೊಂಡು, ನಮ್ಮ ವಂಶ ಪಾರಂಪರ್ಯವಾಗಿ ಬಂದ ಈ ವಿದ್ಯೆ ಇಲ್ಲಿಗೆ ಮುಕ್ತಾಯವಾಗಬೇಕೆ? ಇದಕ್ಕೆ ಬೆಲೆ ಇಲ್ಲವೆ? ಎಂದು ಕಣ್ಣೀರಿಟ್ಟರು'' ಎಂಬುದಾಗಿ ಪರಮೇಶ್ವರಾಚಾರ್ಯರು ಹೇಳಿದ್ದನ್ನು ಶ್ರೀಯುತ ಪಿ. ಆರ್. ತಿಪ್ಪೇಸ್ವಾಮಿ ಅವರು ದಾಖಲಿಸಿದ್ದಾರೆ. (ಶಿಲ್ಪಿಸಂಕುಲ, ಪು 100) ಈ ಘಟನೆ ಪರಮೇಶ್ವರಾಚಾರ್ಯರ ಕುಟುಂಬಕ್ಕೆ ಸಂಬಂಧಿಸಿದ ವೈಯಕ್ತಿಕ ಸಂಗತಿಗಳಂತೆ ಮೇಲುನೋಟಕ್ಕೆ ಗೋಚರಿಸಬಹುದು. ಆದರೆ ಕರ್ನಾಟಕದ ಶಿಲ್ಪಕಲೆಯ ಇತಿಹಾಸದಿಂದ ತೀರ ಪ್ರಮುಖವಾದುದು. (ಈ ಶತಮಾನದ ಆರಂಭ ಕಾಲದ ಚಿತ್ರಕಲೆಯನ್ನು ಕುರಿತು ಆಗಿರುವಷ್ಟು ವಿಷಯ ಸಂಗ್ರಹ, ಸಂಶೋಧನೆಗಳು ಶಿಲ್ಪಕಲೆಯನ್ನು ಕುರಿತು ಆಗಿಲ್ಲವೆಂಬುದು ವಿಷಾದನೀಯ) ಪರಮೇಶ್ವರಾಚಾರ್ಯರು ಜನಿಸಿದ್ದು 1927 ನವೆಂಬರ್ 8 ರಂದು. ಅವರ ಚಿಕ್ಕಂದಿನಲ್ಲಿ ಲಿಂಗಣ್ಣಾಚಾರ್ಯರ ಪ್ರಸಂಗ ನಡೆದಿದ್ದು ಎಂದರೆ ಈ ಶತಮಾನದ ಮೂರನೇ ದಶಕದ ವೇಳೆಗೆ ಮೈಸೂರು ಅರಮನೆಯಲ್ಲಿ ಹೊಸತೊಂದು ವಾತಾವರಣ ಮೂಡಿತು. ಹೊರರಾಜ್ಯಗಳಿಂದ ಅಂದಿಗೆ ಆಧುನಿಕ ಎನ್ನಿಸುವಂತಹ ಶಿಲ್ಪಿಗಳು, ಶಿಲ್ಪಕಲೆ ನಮ್ಮ ರಾಜ್ಯಕ್ಕೆ ಬಂದಿತ್ತು.

ಈ ಪ್ರಸಂಗಕ್ಕೂ ಬಹಳ ಮೊದಲೇ 1913ರಲ್ಲಿಯೇ ಮುಂಬಯಿಯಿಂದ ಗಣಪತಿರಾವ್ ಕಾಶೀನಾಥ ಮ್ಹಾತ್ರೆ ಅವರು ಮೈಸೂರು ಅರಸರ ಕೋರಿಕೆಯ ಮೇಲೆ ಇಲ್ಲಿಗೆ ಬಂದಿದ್ದು ದಿವಾನ್ ಶೇಷಾದ್ರಿ ಅಯ್ಯರ್ ಅವರ ಹಾಗೂ 1916ರಲ್ಲಿ ಚಾಮರಾಜೇಂದ್ರ ಒಡೆಯರ್ ಅವರ ಶಿಲ್ಪಗಳನ್ನು ರಚಿಸಿ ಕೊಟ್ಟಿದ್ದರು. ಮ್ಹಾತ್ರೆಯವರಂತೆಯೇ ಜರ್ಮನಿಯ ಜಿಲಾದಿನ್ ಉಡ್‌ವಿಲ್ಲೆ, ಇಂಗ್ಲೆಂಡ್‌ನ ಸ್ಟರ್ಲಿಂಗ್, ಇಟಲಿಯ ಶಿಲ್ಪಿ ಕೊಲ್ಲಾಸ್ ರಾಬರ್ಟ್ ಎಂಬುವವರುಗಳೂ ಮೈಸೂರು ಅರಸರ ಆಶ್ರಯದಲ್ಲಿ ಇದ್ದರೆಂದು ಕೆ. ವಿ. ಸುಬ್ರಹ್ಮಣ್ಯಂ ಅವರು ತಿಳಿಸುತ್ತಾರೆ. (ಕರ್ನಾಟಕದ ಆಧುನಿಕ ಶಿಲ್ಪಕಲೆ, ಪು. 8) ಮದ್ರಾಸ್‌ನಿಂದ ರಾಘವೇಂದ್ರ ನಾಯ್ಡು ಸಹ ಇಲ್ಲಿಗೆ ಬಂದಿದ್ದರು.

ಒಂದು ಅರ್ಥದಲ್ಲಿ ಮೈಸೂರು ಸಂಸ್ಥಾನ ಆಧುನಿಕತೆಯನ್ನು ಎಲ್ಲ ಕ್ಷೇತ್ರಗಳಲ್ಲೂ ಪ್ರೋತ್ಸಾಹಿಸಿತ್ತು. ಕಳೆದ ಶತಮಾನದ ಅಂತ್ಯದಲ್ಲಿಯೇ ಪಾರ್ಸಿ




ಗಣಪತಿ

ನಾಟಕ ಕಂಪನಿಗಳಿಗೆ ಇಲ್ಲಿ ಅವಕಾಶ ನೀಡಿದ್ದು, ದೇಶೀಯ ನಾಟಕ ಕಂಪನಿಗಳೂ ತಮ್ಮನ್ನು ಸಾಕಷ್ಟು ಸುಧಾರಿಸಿಕೊಂಡವು. ಸಾಂಪ್ರದಾಯಿಕ ಸಂಗೀತಕ್ಷೇತ್ರದ ದಿಗ್ಗಜಗಳೇ ಇಲ್ಲಿದ್ದರೂ, ಪಾಶ್ಚಿಮಾತ್ಯ ಶೈಲಿಯ ವಾದ್ಯಗೋಷ್ಠಿಗಳಿಗೂ ಸಮಾನ ಅವಕಾಶ ಇತ್ತು. 1916ರಲ್ಲಿ ವೆಂಕಟಪ್ಪನವರು ಕಲ್ಕತ್ತೆಯಿಂದ ಬಂದ ಮೇಲೆ ಅವರ ಚಿತ್ರ ಶಿಲ್ಪಗಳು ಅರಮನೆಯಿಂದ ಪುರಸ್ಕೃತವಾಯಿತು. ಆದರೆ 1940ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ತೀರಿಕೊಂಡ ನಂತರ, ಮೈಸೂರು ಅರಮನೆಯಲ್ಲಿ, ತೀರಾ ಸಾಂಪ್ರದಾಯಿಕ ಕೃತಿಗಳಿಗಿಂತ, ಅವುಗಳ ಮುಂದುವರಿದ ರೂಪದ ಬಗ್ಗೆ ಆಸಕ್ತಿ ತೋರುವಂತಾಗಿದ್ದು ದಿಟ. ಇಂದಿಗೂ ಕಲ್ಯಾಣ ಮಂಟಪದಲ್ಲಿರುವ ದಸರೆಯ ಮೆರವಣಿಗೆಯ ದೃಶ್ಯ ಸಂಪ್ರದಾಯ ಕಲೆಯ ಶೈಲಿಯಲ್ಲಿ ಇರಬೇಕಿದ್ದು ನಂತರ ಬದಲಾಗಿ, ಯೂರೋಪಿನ ನೈಜ ಶೈಲಿಯಲ್ಲಿ ರಚಿತವಾಗುವಂತಾಯಿತು. ಈ ಶೈಲಿಗೆ ಒಗ್ಗದ ಸಾಂಪ್ರದಾಯಿಕ ಕಲಾವಿದರು ಅರಮನೆಯಿಂದ ಹೊರಬರಬೇಕಾಯಿತು. ಆದರೆ ಕೇಶವಯ್ಯ, ನಂಜುಂಡಸ್ವಾಮಿ, ಸುಬ್ರಹ್ಮಣ್ಯರಾಜು, ನಾಗರಾಜು ಅವರಂತಹ ಸಂಪ್ರದಾಯ ಶೈಲಿಯಲ್ಲೂ ಪಳಗಿದ ಕಲಾವಿದರು ರಮ್ಯ ಅಥವ ನೈಜ ಶೈಲಿಯನ್ನೂ ಮೈಗೂಡಿಸಿಕೊಂಡಿದ್ದು ಅರಮನೆಯಲ್ಲಿಯೇ ಉಳಿಯುವಂತಾಯಿತು. ಕಲ್ಕತ್ತದಲ್ಲಿ ಕಲಿತು ಬಂದಿದ್ದರೂ, ಅರಮನೆಯ ಧೋರಣೆ ಸರಿಬರದೆ ವೆಂಕಟಪ್ಪ ಮೈಸೂರನ್ನೇ ಬಿಟ್ಟು ಬೆಂಗಳೂರಿಗೆ ಬರುವಂತಾಯಿತು. ಈ ಹಿನ್ನೆಲೆಯಲ್ಲಿ ಪರಮೇಶ್ವರಾಚಾರ್ಯರ ಅಜ್ಜ ಲಿಂಗಣ್ಣಾಚಾರ್ಯರಿಗೂ ಆಧುನಿಕ ಪದ್ಧತಿಗೆ ಸ್ಪಂದಿಸುವುದು ಕಷ್ಟವಾಗಿರ ಬಹುದು. ಆಧುನಿಕತೆ ಅನಿವಾರ್ಯವಾಗಿದ್ದು ಸಾಹಿತ್ಯವೂ ಸೇರಿದಂತೆ ಎಲ್ಲ ಲಲಿತ ಕಲೆಗಳ ಕ್ಷೇತ್ರಗಳಲ್ಲೂ ಈ ಪರಿಸ್ಥಿತಿ ತಲೆದೋರುವಂತಾಯಿತು.

ಇದು ಮುಂದುವರಿದಿದ್ದು ಪರಮೇಶ್ವರಾಚಾರ್ಯರ ತಂದೆ ಮಿರ್ಲೆ ಚೌಡಾಚಾರ್ಯರು ಸಂಪ್ರದಾಯ ಶಿಲ್ಪಕಲೆಯಿಂದ ಹೊರತಾಗಿ ಶಾಲಾ ಉಪಾಧ್ಯಾಯರಾಗುವಂತಾಯಿತು. ಆದರೂ ಅವರು ಜ್ಯೋತಿಶಾಸ್ತ್ರ ಹಾಗೂ



‘ನಂದಿವಾಹನ’ ಶಿವನ ಮೆರವಣಿಗೆ

ಬೆಳ್ಳಿ ಪ್ರತಿಮೆಗಳ ತಯಾರಿಕೆಯನ್ನು ಮುಂದುವರಿಸಿದ್ದರು. ಎಲ್ಲ ಕಲಾವಿದರಿಗೂ ಎಲ್ಲ ಕಾಲಕ್ಕೂ ಅರಮನೆಯೇ ಆಧಾರವಾಗಿರಬೇಕಿರಲಿಲ್ಲ. ಜನಸಾಮಾನ್ಯರೂ ಪೋಷಿಸಿದರಿಂದಲೇ ಕಲೆ ಇಂದು ದೇಶದ ಮೂಲೆ ಮೂಲೆಯಲ್ಲೂ ಜೀವಂತ ಇರುವಂತಾಗಿದೆ. ಇಲ್ಲವಾದರೆ ರಾಜಧಾನಿಯ ಅರಮನೆಯಲ್ಲಿ ಬಂಧಿತ ವಾಗುತಿತ್ತು. ಶಿಲ್ಪಕಲಾ ಪರಂಪರೆ ಪರಮೇಶ್ವರಾಚಾರ್ಯರಿಗೆ ಬಂದದ್ದು ವಿಜಯನಗರ ಕಾಲಕ್ಕೂ ಹಿಂದಿನಿಂದ. ವಿಜಯನಗರದ ಪತನಾ ನಂತರ ಇವರ ಹಿರಿಯರು ಶ್ರೀರಂಗಪಟ್ಟಣ, ಮೈಸೂರು, ಮಿರ್ಲೆಗಳಲ್ಲಿ ನೆಲೆ ನಿಂತರು. ಶಿಲೆ, ಲೋಹ ಹಾಗೂ ಕಾಷ್ಠಗಳಲ್ಲಿ ಮೂರ್ತಿಶಿಲ್ಪಗಳ ರಚನೆ ಮಾಡುತ್ತಿದ್ದುದಲ್ಲದೆ ಜ್ಯೋತಿಷ್ಯ ವೈದ್ಯ, ಮಂತ್ರ ಮುಂತಾದವುಗಳಲ್ಲೂ ಸಾಕಷ್ಟು ಪರಿಣತಿಯನ್ನು ಪಡೆದಿದ್ದರು. ''ಪರಮೇಶ್ವರಾಚಾರ್ಯರ ವಂಶಿಕರು ರಚಿಸಿದ ಲೋಹದ ಮೂರ್ತಿಗಳು ಮರದ ರಥಗಳು ನಿಲ್ಲಿಸಿರುವ ಧ್ವಜ ಸ್ಥಂಭಗಳು ರಾಮನಾಥಪುರ, ಬಸವಾಪಟ್ಟಣ, ಎಡತೊರೆ, ಹೇಮಗಿರಿ ಮಲ್ಲಿಪಟ್ಟಣ, ಅರಕಲಗೂಡು ಮೊದಲಾದ ಗ್ರಾಮಗಳ ದೇವಾಲಯಗಳಲ್ಲಿವೆ. ಶ್ರೀರಂಗಪಟ್ಟಣದ ಸುಲ್ತಾನರ ಕಾಲದಲ್ಲಿ ನಿರ್ಮಿಸಿದ ರಣಗಂಬದ ಶಿಲ್ಪಕ್ಕೆ ಪರಮೇಶ್ವರಾಚಾರ್ಯರ ಪೂರ್ವಜರಿಗೆ ಚಿನ್ನ, ಬೆಳ್ಳಿದಲ್ಲಿ ನಿರ್ಮಿಸಿದ ಗಜಕಡ್ಡಿ (ಅಳತೆಪಟ್ಟಿ)ಯ ವಿಶೇಷ ಬಹುಮಾನವೂ ಅರಮನೆಯಿಂದ ಕೊಡಲ್ಪಟ್ಟಿತ್ತು'' (ಶಿಲ್ಪಿ ಸಂಕುಲ ಪು 99).

ಅದೃಷ್ಟವಶಾತ್ ಪರಮೇಶ್ವರಾಚಾರ್ಯರ ತಾಯಿಯ ಕಡೆಯವರೂ ಖ್ಯಾತಶಿಲ್ಪಿಗಳಾಗಿದ್ದು ಮತ್ತೊಮ್ಮೆ ಈ ವಂಶದಲ್ಲಿ ಶಿಲ್ಪಕಲೆ ಉಚ್ಛ್ರಾಯ ಸ್ಥಿತಿಗೆ ಬರಲು ಕಾರಣವಾಯಿತು. ಸೋದರಮಾವ ಎಲ್. ಈಶ್ವರಾಚಾರ್ಯರು ಕಾಷ್ಠ ಶಿಲ್ಪದಲ್ಲಿ ಪ್ರಸಿದ್ಧಿ ಪಡೆದು ಮೈಸೂರು ಅರಮನೆಯಲ್ಲಿ ಗೌರವ ಸ್ಥಾನವನ್ನು ಪಡೆದಿದ್ದರು. ಇವರಲ್ಲದೆ ಇನ್ನೊಬ್ಬ ಸೋದರಮಾವ ಶಿವಶಂಕರಾಚಾರ್ಯ ಮತ್ತು ಅಣ್ಣ ಸದಾನಂದಾಚಾರ್ಯ ಅವರು ಅಪಾರ ಪ್ರೋತ್ಸಾಹ ನೀಡಿದರು. ಇಂದು ಚಾಮುಂಡಿ ಬೆಟ್ಟದ ಮೇಲೆ ಪ್ರವಾಸಿಗಳಿಗೆ ವಿಶೇಷ ಆಕರ್ಷಣೆಯಾಗಿರುವ ಮಹಿಷಾಸುರನ ಬೃಹತ್ ಪ್ರಮಾಣದ ಗಾರೆಯ ಶಿಲ್ಪ ಪರಮೇಶ್ವರಾಚಾರ್ಯರ ಅಣ್ಣ ಶಿವನಂಜಯ್ಯ ಹಾಗೂ ಅವರ ಗುರು ಗೋವಿಂದಪ್ಪ ಅವರಿಂದ ರೂಪಗೊಂಡಿದ್ದು. ಶಿಲ್ಪ ಶಾಸ್ತ್ರಗಳಲ್ಲಿ ಗಾರೆಯ

ಶಿಲ್ಪಗಳಿಗೇ ಒಂದು ವಿಶೇಷ ಸ್ಥಾನವಿದೆ. ವಿಜಯನಗರದ ಅರಸರೇ ಬೃಹದಾಕಾರದ ರಾಯಗೋಪುರಗಳನ್ನು, ದೇವಾಲಯದ ಸುತ್ತಾಲಯ, ಪ್ರಾಕಾರಗಳನ್ನು ಕಟ್ಟಿಸಿದ್ದು ಅಲ್ಲಿ ಸಾವಿರಾರು ಸಂಖ್ಯೆಯಲ್ಲಿ ಗಾರೆಯ ಶಿಲ್ಪಗಳ ರಚನೆಯಾಗುವಂತಾಯಿತು. ಈ ಪದ್ಧತಿಯನ್ನು ಮೈಸೂರು ಅರಸರೂ ಮುಂದುವರಿಸಿದರು. ಹೀಗಾಗಿ ಮೃತ್ ಶಿಲ್ಪವೂ ಸೇರಿದಂತೆ ಲೋಹ, ಕಾಷ್ಠ, ದಾರು, ಶಿಲಾ ಶಿಲ್ಪಗಳಲ್ಲಿ ಪರಮೇಶ್ವರಾಚಾರ್ಯರಿಗೆ ಚಿಕ್ಕಂದಿನಿಂದಲೇ ಪ್ರಯೋಗಮಾಡುವ ಅವಕಾಶ ಒದಗಿ ಬಂದು ಆಯಾ ಮಾಧ್ಯಮಗಳಲ್ಲಿ ಪರಿಣತಿ ಪಡೆಯುವಂತಾಯಿತು. ಜೊತೆಗೆ ಜ್ಯೋತಿಷ್ಯ, ಶಿಲ್ಪ ಶಾಸ್ತ್ರಗಳಿಗೆ ಸಂಬಂಧಿಸಿದ ವಿಚಾರಗಳೂ ಕರಗತವಾಯಿತು.

## ಬದುಕಿನ ಹಾದಿ

ಸಂಪ್ರದಾಯ ಶಿಲ್ಪಿಗಳೆಲ್ಲ ಕಡ್ಡಾಯವಾಗಿ ಕಲಿಯಬೇಕಿದ್ದೆಂದರೆ ಶಿಲ್ಪಕ್ಕೆ ಸಂಬಂಧಿಸಿದ ತಾಳಮಾನಾದಿಯಾಗಿ ಧ್ಯಾನ ಶ್ಲೋಕಗಳ ಕಂಠಪಾಠ. ಒಂದು ಶಿಲ್ಪ ರಚಿಸಬೇಕಾದರೆ ಧ್ಯಾನಶ್ಲೋಕದಲ್ಲಿಯ ಮೂರ್ತಿ ವರ್ಣನೆಯನ್ನು ಕಣ್ಣ ಮುಂದೆ ತಂದುಕೊಳ್ಳಬೇಕು. ಅದನ್ನು ಮನನ ಮಾಡುತ್ತಾ ಆಕಾರವನ್ನು ರೂಪಿಸುತ್ತಾ ಹೋಗಬೇಕು. ಜೊತೆಗೆ ಆ ಮೂರ್ತಿಗೆ ಸಂಬಂಧಿಸಿದ ತಾಳಮಾನಾದಿ ಕಲೆಯ ವ್ಯಾಕರಣ ಅರಿತಿರಬೇಕು. ಕೃತಿ ರಚನೆಯ ಮಾಧ್ಯಮಕ್ಕೆ ತಕ್ಕಂತೆ ವಸ್ತುವಿನ ಗುಣಾವಗುಣಗಳನ್ನು ಅರಿತಿರಬೇಕು. ಒಂದು ಅರ್ಥದಲ್ಲಿ ಅಜ್ಜ ನಿರಾಶೆಯಿಂದ ದೂರಸರಿಸಿದ್ದ ಶಿಲ್ಪಕಲೆಯನ್ನು ಮೊಮ್ಮಗ ಕುಲಕಸಬು ಎಂಬಂತೆ, ಆ ಮೂಲಕ ಮನಸ್ಸಿನ ಭಾವನೆಗಳಿಗೆ ರೂಪಕೊಡಲು ಸಾಧ್ಯವೆಂಬಂತೆ ಮತ್ತೆ ಸ್ವಾಗತಿಸಿದರು. ಅಜ್ಜನಿಗೆ ಶಿಲ್ಪ ವಂಶಪಾರಂಪರ್ಯವಾಗಿ ಬಂದದ್ದು. ಆದರೆ ಪರಮೇಶ್ವರಾಚಾರ್ಯರು ಕಂಡಿದ್ದು ಶಿಲ್ಪ ರಚನೆಯಲ್ಲಿಯ ಸೌಂದರ್ಯಾಭಿವ್ಯಕ್ತಿಯನ್ನು.

ಸಂಪ್ರದಾಯದ ನೆಲಗಟ್ಟಿನಲ್ಲಿಯೇ ಅದರ ಮುಂದುವರಿದ ರೂಪ ಕಾಣಬೇಕಿತ್ತು. ಸಾಂಪ್ರದಾಯಿಕವಾಗಿಯೇ ಧ್ಯಾನಶ್ಲೋಕಗಳನ್ನು ಮನನ ಮಾಡತೊಡಗಿದರು. ತಾಯಿಯ ತೌರಿನ ಕಡೆಯವರಿಂದ ಶಿಲ್ಪಕಲೆಗೆ ಪ್ರೋತ್ಸಾಹ

ಸಿಕ್ಕಿದ್ದು ಒಂದಾದರೆ, ತಂದೆಯವರ ಉಪವೃತ್ತಿಯಾದ ಜ್ಯೋತಿಷ್ಯ, ತಂತ್ರ ಮಂತ್ರಗಳ ಕಸುಬಿಗೆ ಸಂಚಕಾರ ಬಂದಿದ್ದು ಇನ್ನೊಂದು. ಈ ಪ್ರಸಂಗವೂ ಅಷ್ಟೇ ರೋಚಕವಾಗಿದೆ. ಈ ಉಪವೃತ್ತಿಯಿಂದಾಗಿ "ಕೈತುಂಬಾ ಸಂಪಾದನೆ ಯಾಗುತಿತ್ತು. ಆದರೆ ನನ್ನ ತಾಯಿಗೆ ಈ ವೃತ್ತಿ ಹಿಡಿಸಲಿಲ್ಲ. ಈ ಗಳಿಕೆ ನೆಮ್ಮದಿ ಕೊಡಲಿಲ್ಲ. ಇತರರು ತಮ್ಮ ಪೀಡೆ ಕಳೆದುಕೊಳ್ಳಲು ಕೊಟ್ಟಿದ್ದು ಆ ಪೀಡೆ ನಮಗೆ ಬಡಿದುಕೊಳ್ಳುತ್ತದೆ ಎಂಬ ಅಳಕು ನಮ್ಮ ತಾಯಿಗಿತ್ತು. ಒಂದು ದಿನ ನಮ್ಮ ತಂದೆ ಪರ ಊರಿಗೆ ಹೋಗಿದ್ದ ವೇಳೆ ತಾಯಿಯವರು ಜ್ಯೋತಿಷ್ಯ ಮಂತ್ರ ತಂತ್ರ ಓಲೆಗರಿ ಕಟ್ಟುಗಳನ್ನು ಬೇರೊಬ್ಬರಿಗೆ ಕೊಟ್ಟು ಬಿಟ್ಟರು" ಎಂದು ಪರಮೇಶ್ವರಾಚಾರ್ಯರು ಆಗಾಗ್ಗೆ ನೆನಪಿಸಿಕೊಳ್ಳುತ್ತಾರೆ. (ಶಿಲ್ಪಿಸಂಕುಲ 101) ಹೀಗಾಗಿ ತಂದೆಯ ಉಪವೃತ್ತಿ ತ್ಯಜಿಸಿ ತಮ್ಮ ವಂಶ ಪಾರಂಪರ್ಯವಾದ ಕಲಾಕೃತಿ ನಿರ್ಮಾಣಕ್ಕೆ ಮನ ಮಾಡುವಂತಾಯಿತು.

**ವಿದ್ಯಾತುರಾಣಾಂ....**

ಈ ವೇಳೆಗೆ ಮಿಷನ್ ಹೈಸ್ಕೂಲ್‌ನಲ್ಲಿ ಎಲ್.ಎಸ್. ಮುಗಿಸಿದ್ದು ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಕಾಷ್ಠ ಶಿಲ್ಪ ರಚನೆಯನ್ನು ಅಭ್ಯಸಿಸಲು ಸೇರಿಕೊಂಡರು. ಸುಮಾರು ಐದು ವರ್ಷಗಳ ಕಾಲ ಅಲ್ಲಿದ್ದರು. ಒಂದು ವಿಧದಲ್ಲಿ ಪರಮೇಶ್ವರಾಚಾರ್ಯರಿಗೆ ಹೆಸರು, ಪ್ರಶಸ್ತಿಗಳನ್ನು ತಂದು ಕೊಟ್ಟಿರುವುದು ಕಾಷ್ಠ ಶಿಲ್ಪಗಳೇ. ಪ್ರಥಮ ರಾಷ್ಟ್ರ ಪ್ರಶಸ್ತಿ 1965ರಲ್ಲಿ ದೊರೆತದ್ದು ಇವರ ಕಾಷ್ಠ ಶಿಲ್ಪಕ್ಕೆ. ವಾರಣಾಸಿಯ ಆನಂದಮಯಿ ಆಶ್ರಮಕ್ಕೆ, ಮುಂಬಯಿಯ ಗೋದಾವರಿ ಶುಗರ್ ಮಿಲ್ಸ್‌ಗೆ ರಚಿಸಿಕೊಟ್ಟ ದೊಡ್ಡ ಪ್ರಮಾಣದ ಶಿಲ್ಪಗಳೆಲ್ಲ ಕಾಷ್ಠದಿಂದ ಮಾಡಿರುವಂತಹವೇ. ಕಮಲಾದೇವಿ ಚಟ್ಟೋಪಾಧ್ಯಾಯ ಅವರ ನೇತೃತ್ವದಲ್ಲಿ ಬೃಹತ್ ಪ್ರಮಾಣದಲ್ಲಿ ಪ್ರತಿಕೃತಿಗಳನ್ನು ಮಾಡಿದ್ದು ಮೆಕ್ಕೆಕಟ್ಟೆಯ ಕಟ್ಟಿಗೆ ಶಿಲ್ಪಗಳನ್ನೇ (ಉರುಗಳು). ಅಲ್ಲದೆ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ನಡೆದ ಹಲವಾರು ಕಾಷ್ಠ ಶಿಲ್ಪ ಕಾರ್ಯಾಗಾರಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. ತಾಯಿಯವರ ಕಡೆಯಿಂದ ಬಂದ ಕಾಣಿಕೆ ಕಾಷ್ಠ ಶಿಲ್ಪ. ತಾಯಿಯೂ ಸೇರಿದಂತೆ, ಸೋದರ

ಮಾವಂದಿರು ಅವರ ಹಿರಿಯರೆಲ್ಲ ರಥ ಶಿಲ್ಪಿಗಳು. ತಂದೆಯ ತಂದೆ ಕಾಳಾಚಾರ್ಯರು ಹಾಗೂ ಅವರ ಹಿರಿಯರೆಲ್ಲ ಲೋಹ ಶಿಲ್ಪಿಗಳು. ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ನಾಲ್ಕು ವರ್ಷಗಳ ತಳಹದಿ ಅಧ್ಯಯನ ಮಾಡಿ ಐದನೇ ವರ್ಷದ ಕಾರ್ಯಾಗಾರ (ವರ್ಕ್‌ಷಾಪ್) ಅಧ್ಯಯನವನ್ನು ಆರಂಭಿಸಿದರು. ಇಲ್ಲಿಯೂ ಶಿಲ್ಪಿ ಜವರಾಯಾಚಾರ್ಯ ಹಾಗೂ ಈಶ್ವರಾಚಾರ್ಯರೇ ಬೋಧಕ ವರ್ಗದಲ್ಲಿದ್ದರು. ಅಂತಿಮ ವರ್ಷದ ಎಂದರೆ 'ಕಾರ್ಯಾಗಾರ' ತರಗತಿಯಲ್ಲಿ ಸಾರ್ವಜನಿಕರಿಂದಲೂ ಕೃತಿಗಳನ್ನು ಬೇಡಿಕೆಯ ಮೇಲೆ ತೆಗೆದುಕೊಂಡು ಪೂರೈಸಬಹುದಿತ್ತು. ಹೀಗಾಗಿ ಪರಮೇಶ್ವರಾ ಚಾರ್ಯರಿಗೆ ಲೋಹ ಹಾಗೂ ಕಾಷ್ಠ ಶಿಲ್ಪಗಳಲ್ಲಿ ತಕ್ಕಮಟ್ಟಿನ ಪರಿಶ್ರಮ ದೊರೆಯುವಂತಾಯಿತು. ಇನ್ನು ಉಳಿದಿದ್ದು ಶಿಲಾ ಶಿಲ್ಪ.

ಶಿಲಾ ಶಿಲ್ಪ ರಚನೆಯಲ್ಲಿ ಆಚಾರ್ಯರಿಗೆ ಪರಿಣತಿ ದೊರೆಯು ವಂತಾಗಿದ್ದು ಅಂದಿನ ನಾಡಿನ ಶ್ರೇಷ್ಠಶಿಲ್ಪಿಗಳಾಗಿದ್ದ ಪರಮ ಪೂಜ್ಯ ಸಿದ್ಧಲಿಂಗ ಸ್ವಾಮಿಗಳಿಂದ. ಪರಮೇಶ್ವರಾಚಾರ್ಯರ ಜೀವನದಲ್ಲಿ ಬಹುದೊಡ ತಿರುವು ಈ ಸಂಬಂಧದಿಂದಾಯಿತು.

## ಆರಂಭದ ಸಾಧನೆ

ಪರಮೇಶ್ವರಾಚಾರ್ಯರು ಸಿದ್ಧಲಿಂಗ ಸ್ವಾಮಿ ಅವರ ಬಳಿ ಇದ್ದಾಗ ರಚಿಸಿದ ಮುಖ್ಯವಾದ ದೇವಾಲಯಗಳೆಂದರೆ ಕಾಮಕಾಮೇಶ್ವರಿ ಹಾಗೂ ಭುವನೇಶ್ವರಿಯ ಮಂದಿರಗಳು. ಮೈಸೂರು ಅರಮನೆಯ ಆವರಣದಲ್ಲಿಯೇ ಇರುವುದು ಭುವನೇಶ್ವರಿ ದೇವಾಲಯವಾದರೆ ರಾಮಾನುಜ ರಸ್ತೆಯಲ್ಲಿರುವುದು ಕಾಮಕಾಮೇಶ್ವರಿ ದೇವಾಲಯ. ಕಾಮಕಾಮೇಶ್ವರಿ ಒಂದು ಅಪರೂಪದ ಶಿಲ್ಪ. ದೇವಿ ಭುವನೇಶ್ವರಿ ತ್ರಿಮೂರ್ತಿಗಳನ್ನು ಸೃಷ್ಟಿಸಿ, ನಂತರ ಅವರಲ್ಲೇ ಮೋಹಗೊಳ್ಳಲು ವಿಷ್ಣು-ಬ್ರಹ್ಮರು ಆಕೆಗೆ ಶಾಪಕೊಟ್ಟರು. ಶಿವ ತನಗೆ ಯೋಚನೆ ಮಾಡಲು ಕೆಲ ಸಮಯ ಅವಕಾಶ ಬೇಕೆಂದು ಕೇಳಿ ಏಕಪಾದ ಮೂರ್ತಿಯಾಗಿ, ಬ್ರಹ್ಮ, ವಿಷ್ಣುರವರುಗಳನ್ನು ಹೆಗಲ ಮೇಲೆ ಹೊತ್ತು ಧ್ಯಾನಾಸಕ್ತನಾಗಿ ನಿಲ್ಲುತ್ತಾನೆ. ಇದು ಶಿವನ ಪಂಚವಿಂಶತಿ ಲೀಲೆಯಲ್ಲಿ ಒಂದು

ಪ್ರಸಂಗ. ಆಗ ಶಿವ ಕಾಮ ಆದನೆಂದೂ ಭುವನೇಶ್ವರಿ ಕಾಮೇಶ್ವರಿ ಆದಳೆಂದೂ, ಬ್ರಹ್ಮ, ವಿಷ್ಣು, ಪರಮೇಶ್ವರ ಹಾಗೂ ರುದ್ರರು ಉಯ್ಯಾಲೆಯ ನಾಲ್ಕು ಪಾದಗಳು ಆದರೆಂದೂ ಸಾಕ್ಷಾತ್ ಸದಾಶಿವನೇ ಉಯ್ಯಾಲೆಯ ಮಣೆ ಆದನೆಂದೂ ಅದರ ಮೇಲೆ ಇಕ್ಷುಚಾಪ, ಪುಷ್ಪಬಾಣ ಇತ್ಯಾದಿಗಳಿಂದ ಕೂಡಿದ ಎಂಟು ಕೈಗಳನ್ನು ಹೊಂದಿದ ಕಾಮ ದೇವ ಕುಳಿತಿದ್ದು ತೊಡೆಯ ಮೇಲೆ ಇಕ್ಷುಚಾಪ ಹೊಂದಿ ಕಾಮೇಶ್ವರಿ ಆಸೀನಳಾಗಿದ್ದಾಳೆ ಸುತ್ತ ವೃತ್ತಾಕಾರದ ಪ್ರಭಾವಳಿಯನ್ನು ಹೊಂದಿದ್ದು ಶಿರೋಭಾಗದಲ್ಲಿ ಸಿಂಹ ಲಲಾಟವಿದೆ.

ಭುವನೇಶ್ವರಿಯ ವಿಗ್ರಹದಲ್ಲಿ ಆಕೆಯೊಬ್ಬಳೇ ಒಂದು ಪಾದ ಇಳಿಬಿಟ್ಟು ಇನ್ನೊಂದು ಮಡಿಸಿಕೊಂಡು ಆಸೀನೆಯಾಗಿದ್ದಾಳೆ, ನಾಲ್ಕು ಕೈಗಳನ್ನು ಹೊಂದಿದ್ದು ಇಕ್ಷುಚಾಪ, ಪುಷ್ಪಬಾಣ ಹೊಂದಿದ್ದಾಳೆ. ಪೀಠದಲ್ಲಿ ಪರಿವಾರ



ಕಾಮಕಾಮೇಶ್ವರಿ ದೇವಾಲಯ, ಮೈಸೂರು

ದೇವತೆಗಳಿದ್ದಾರೆ. ಇವಲ್ಲದೆ ಇದೇ ಅವಧಿಯಲ್ಲಿ ಆಚಾರ್ಯರು ಮೈಸೂರು ಮಹಾರಾಜ ಕಾಲೇಜಿನಲ್ಲಿರುವ ಜ್ಞಾನ ಸರಸ್ವತಿ ಹಾಗೂ ಆವರಣದಲ್ಲಿರುವ ಅಶೋಕ ಸ್ಥಂಭ, ಶಂಕರನಾರಾಯಣ ದೇವಾಲಯದಲ್ಲಿರುವ ಬ್ರಹ್ಮ ಚೈತನ್ಯ ಸ್ವಾಮೀಜಿಗಳ ಕೃತಿಗಳನ್ನೂ ರೂಪಿಸಿದರು.

## ಶಿಲಾಶಿಲ್ಪಿ

ಆಚಾರ್ಯರು ಸಿದ್ಧಲಿಂಗ ಸ್ವಾಮಿ ಅವರ ಬಳಿ ಶಿಲಾಶಿಲ್ಪ ಕಲಿಯಲು ಹಲವು ಕಾರಣಗಳನ್ನು ನೀಡಬಹುದು. ತಾಯಿಯ ಕಡೆಯಿಂದ ಕಾಷ್ಠಶಿಲ್ಪ ರಚನೆ ಹಾಗೂ ತಂದೆಯ ಕಡೆಯಿಂದ ಲೋಹ ಶಿಲ್ಪ ರಚನೆಗಳಲ್ಲಿ ಪರಿಶ್ರಮ ಪಡೆದಾಗಿದ್ದು ಶಿಲಾಶಿಲ್ಪ ರಚನೆಯಲ್ಲೂ ಪರಿಣತಿ ಪಡೆಯಬಯಸಿದ್ದು ಒಂದಾದರೆ, ಇನ್ನೊಂದು ಮನೆಯಲ್ಲಿ ಆದ ನಿರಾಶೆಯ ಪ್ರಸಂಗ. ಅವರ ಮಾತಲ್ಲೇ ಹೇಳುವುದಾದರೆ ''ನನ್ನ ತಂದೆ ತೀರಿಕೊಂಡ ಮೇಲೆ, ನನ್ನ ಸೋದರಮಾವ ಎಲ್. ಈಶ್ವರಾಚಾರ್ಯರ ಜೊತೆ ಎಂಟು ಹತ್ತು ವರ್ಷಗಳ ಕಾಲ ಕೆಲಸ ಮಾಡುತ್ತಿದ್ದೆ. ಜನರ ಅನಾದರಣೆಯಿಂದ ಸಂಸಾರ ಸಾಗಿಸುವುದು ಸೋದರಮಾವನಿಗೆ ಕಷ್ಟವಾಯಿತು. ಮೈಸೂರು ಬಿಟ್ಟು ನಂಜನಗೂಡಿಗೆ ಹೋಗಿ ಸೇರಿಬಿಟ್ಟರು. ಆಗ ಅವರಿಗೆ ಬುದ್ಧಿ ಭ್ರಮಣೆಯಾಯಿತು. ಅವರಲ್ಲಿ ಇದ್ದ ಸಚಿತ್ರ ಧ್ಯಾನ ಶ್ಲೋಕಗಳ ಶಿಲ್ಪದ ಗ್ರಂಥಗಳನ್ನು, ಪೂಜಿಸುತ್ತಿದ್ದ ವಿಜಯನಗರ ಕಾಲದ ವಿಗ್ರಹಗಳನ್ನು ಒಂದು ದಿನ ಪೂಜೆ ಮಾಡಿ ನದಿಯಲ್ಲಿ ತೇಲಿಬಿಟ್ಟು ಬಂದರು. ಜನಗಳ ನಿರ್ಲಕ್ಷ್ಯದಿಂದ ಹುಚ್ಚರಂತಾದರು. ನಮ್ಮ ಪುರಾತನ ಸಾಹಿತ್ಯ ನೀರುಪಾಲಾಯಿತು'' (ಶಿಲ್ಪಿಸಂಕುಲ 104) ಇಂತಹ ಪ್ರಸಂಗಗಳು ಪರಮೇಶ್ವರಾಚಾರ್ಯರನ್ನು ಧೃತಿಗೆಡುವಂತೆ ಮಾಡಲಿಲ್ಲ ಎನ್ನುವುದೇ ವಿಶೇಷ. ಬದಲಿಗೆ ಅವರು ಜನಾದರಣೆಯನ್ನು ಒಂದು ಸವಾಲಾಗಿ ಸ್ವೀಕರಿಸಿದರು. ಜನರಿಂದಷ್ಟೇ ಅಲ್ಲ ಸಂಘ ಸಂಸ್ಥೆಗಳಿಂದ ಸರ್ಕಾರದಿಂದಲೂ ಆದರಣೆ, ಪುರಸ್ಕಾರಗಳನ್ನು ಪಡೆದರು. ಪಡೆಯುತ್ತಲೇ ಇರುವರು. ಅದಕ್ಕೆ ಕಾರಣ ಆಚಾರ್ಯರು ಪ್ರತಿಯೊಂದು ಸಣ್ಣ ವಿಷಯವೇ ಆಗಲೀ ಕೂಲಂಕಶವಾಗಿ

ಅಭ್ಯಸಿಸುವುದು. ಶಿಲ್ಪ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಾವಿರಾರು ಶ್ಲೋಕಗಳನ್ನು ಕಂಠಪಾಠ ಮಾಡಿದ್ದಾರೆ. ಅರಳು ಹುರಿದಂತೆ ಪಟಪಟನೆ ಉದಾಹರಿಸುತ್ತಾರೆ. ಶಿಲ್ಪ, ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಯಾವುದೇ ಸಂದೇಹವಿರಲಿ ಇವರಲ್ಲಿ ಉತ್ತರ ಸಿದ್ಧವಿರುತ್ತದೆ.

ಸಿದ್ಧಲಿಂಗ ಸ್ವಾಮಿಗಳ ಬಳಿ ಇದ್ದ ಕಾಲ ಆಚಾರ್ಯರಿಗೆ ಒಂದು ಪರ್ವಕಾಲ "ಸಿದ್ಧಲಿಂಗ ಸ್ವಾಮಿಗಳು ಬರೇ ಕಂಠಪಾಠದಿಂದ ಶಾಸ್ತ್ರಾಭ್ಯಾಸ ಮಾಡಿ ಜ್ಞಾನ ಪ್ರದರ್ಶನ ಮಾಡುತ್ತಿದ್ದವರಲ್ಲ. ತಾವು ಕಲಿತ ಶಾಸ್ತ್ರವನ್ನು ಪ್ರಯೋಗದಿಂದ ತೋರಿಸಬಲ್ಲವರಾಗಿದ್ದರು.... ಮೂರ್ತಿಗಳ ರಚನೆಗಳಲ್ಲಿ ಅನುಸರಿಸಬೇಕಾದ ಕ್ರಮ, ನಿಯಮ ಅವುಗಳ ಅವಶ್ಯಕತೆ ಮೊದಲಾದವುಗಳನ್ನು



ಕಾರ್ಯನಿರತ ಆಚಾರ್ಯರು

ಒತ್ತಿ ಹೇಳಿ ಮನದಟ್ಟು ಮಾಡಿಸುತ್ತಿದ್ದರು.'' (ಸುಧಾ 17.11.96) ಎಂದು ಹೃದಯ ತುಂಬಿ ನೆನೆಸಿಕೊಳ್ಳುತ್ತಾರೆ. ಮೂರ್ತಿ ಪ್ರತಿಷ್ಠಾಪನೆಯಲ್ಲಿಯೂ (ಅಷ್ಟ ಬಂಧನ) ಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ಧಾತುಗಳನ್ನೇ ಬೆರಸಿ ಅದರಂತೆ ಮಾಡಿದರೂ ಅದು ಪಾಕ ಕೈಗೂಡುವುದೇ ಇಲ್ಲ. ''ಅದು ಯಾವುದೋ ಒಂದು ಪಾಕ, ಒಂದು ಹದ, ಸ್ವಾಮಿಗಳು ಕೈಹಾಕಿದರೆ ಅದು ತಾನಾಗೇ ಕೂಡಿ ಅಂಟು ಧಾತುವಾಗುತಿತ್ತು. (ಸುಧಾ 30.5.71) ಎನ್ನುವ ಪರಮೇಶ್ವರಾಚಾರ್ಯರು ಸ್ವಾಮಿಗಳ ಬಳಿ ಶಿಲ್ಪ ಕಲೆಯ ಮರ್ಮಗಳನ್ನರಿತರು.

## ಹೂ-ಬಳ್ಳಿಗಳ ವಿನ್ಯಾಸ

ಪರಮೇಶ್ವರಾಚಾರ್ಯರ ಮುಂದಿನ ಅವತರಣಿಕೆಯನ್ನು ಬೆಂಗಳೂರಿನ ವಿಧಾನಸೌಧದಲ್ಲಿ ಕಾಣುತ್ತೇವೆ. ಮೈಸೂರು ರಾಜರಿದ್ದ ರಾಜಧಾನಿಯಾದರೆ, ಕಳೆದ ಶತಮಾನದಲ್ಲೇ ಬೆಂಗಳೂರು ಆಡಳಿತ ಯಂತ್ರವಿದ್ದ ರಾಜಧಾನಿ ಯಾಗಿತ್ತು. ಅಠಾರ ಕಚೇರಿ ಇಲ್ಲಿದ್ದು ದಿವಾನರು ಇಲ್ಲಿ ನೆಲೆಸಿದ್ದು ಆಡಳಿತ ಕಾರ್ಯ ಬೆಂಗಳೂರಿನಿಂದಲೇ ನಡೆಯುತ್ತಿತ್ತು. ರಾಜರು ಆಗಾಗ್ಗೆ ಸಭೆಗಳಿಗೆ ಬರುತ್ತಿದ್ದರು. ಸ್ವಾತಂತ್ರ್ಯ ಬಂದ ಮೇಲೆ ರಾಜರು ಅಲ್ಲಿಯೇ ಮೈಸೂರಿನಲ್ಲಿ ಉಳಿದರು. ರಾಜಧಾನಿ ಪೂರ್ಣವಾಗಿ ಬೆಂಗಳೂರಾಯಿತು. ಅಠಾರ ಕಚೇರಿಯಲ್ಲಿ ಸ್ಥಳಾವಕಾಶ ಸಾಲದಾಯಿತು. ಮೈಸೂರಿನ ಅರಮನೆ ಕಣ್ಣ ಮುಂದಿತ್ತು. ಅಂದಿನ ಮುಖ್ಯಮಂತ್ರಿ ಹನುಮಂತಯ್ಯ ಅವರಿಗೆ ನಮ್ಮ ಕರ್ನಾಟಕದ್ದೇ ಆದ ಸಾಂಪ್ರದಾಯಿಕ ಶೈಲಿಯ ವಿಶಾಲ ಹರಹಿನ 'ವಿಧಾನಸೌಧದ' ಕನಸಿನ ಕಲ್ಪನೆ ಆಳದಲ್ಲಿತ್ತು. ಸೌಧದ ಮಾನಸಿಕ ಶಿಲ್ಪಿ ಹನುಮಂತಯ್ಯ ಅವರಾದರೆ ಅದಕ್ಕೊಂದು ಚಾಕ್ಷುಕ ರೂಪ ನೀಡಿದ ಶಿಲ್ಪಿ ನಾಗೇಂದ್ರ ಸ್ಥಪತಿ ಅವರು. ಅದನ್ನನುಸರಿಸಿ ಕ್ರಿಯಾಶೀಲವಾಗಿ ದುಡಿದು ಕನಸಿನ ಸೌಧವನ್ನು ನನಸಾಗಿಸಿದವರು ಪರಮೇಶ್ವರಾಚಾರ್ಯರೂ ಸೇರಿದಂತೆ ಸಾವಿರಾರು ಶಿಲ್ಪಿಗಳು.

ಮುಖಮಂಟಪ, ಸುತ್ತಾಲಯದ ಭಿತ್ತಿ, ದೇವಕೋಷ್ಠ, ದ್ವಾರ ಬಂಧ ಪಾವಟಿಕೆ, ಗೋಪುರ ಇತ್ಯಾದಿ ಎಲ್ಲವೂ ಶಿಲ್ಪಮಯವಾಗಿ, ಸಾಂಪ್ರ

ದಾಯಿಕವಾಗಿ, ನಮ್ಮ ಪೂರ್ವದ ಚಾಳುಕ್ಯ, ಹೊಯ್ಸಳ ದೇವಾಲಯಗಳನ್ನು ನೆನಪಿಸುವಂತೆ, ಇಡಿಯಾಗಿ ಕಲ್ಲಿನಲ್ಲೇ ನಿರ್ಮಿಸಿದ, ಅತ್ಯಂತ ಅರ್ವಾಚೀನ ದೇವಾಲಯವೆಂದರೆ ಮೈಸೂರಿನ ಕಾಮಕಾಮೇಶ್ವರಿ ದೇವಾಲಯ. ಹಾಗೆಂದೇ ಹನುಮಂತಯ್ಯನವರು ಈ ದೇವಾಲಯದ ನಿರ್ಮಾತೃ ಶ್ರೀ ಸಿದ್ಧಲಿಂಗ ಸ್ವಾಮಿ ಅವರನ್ನು ವಿಧಾನಸೌಧದ ರಚನೆಯ ಬಗ್ಗೆ ಕೇಳಿದ್ದಲ್ಲಿ ಆಶ್ಚರ್ಯವಿಲ್ಲ. ವಿಧಾನಸೌಧ ಹೇಳಿಕೇಳಿ ಒಂದು ಸರ್ಕಾರೀ ಕಚೇರಿಯಾದುದರಿಂದ ಅದರ ಒಳಾಂಗಣ ವಿನ್ಯಾಸ ಆ ವಿಭಾಗಕ್ಕೆ ಸೇರಿದ ವಾಸ್ತು ಶಿಲ್ಪಿಗಳ ಕಾರ್ಯವಾದರೆ ಹೊರ ವಿನ್ಯಾಸ ಸಾಂಪ್ರದಾಯಿಕ ಶಿಲ್ಪಿಗಳದ್ದು. ಶ್ರೀ ಸಿದ್ಧಲಿಂಗಸ್ವಾಮಿ ಅವರ ಪುತ್ರರಾದ ನಾಗೇಂದ್ರ ಸ್ಥಪತಿ ಅವರು ಗೋಪುರಾದಿ ಕೆಲ ವಿನ್ಯಾಸ ಮಾಡಿಕೊಟ್ಟರು. "ವಿಧಾನ ಸೌಧದ ಗೋಪುರವನ್ನು ದ್ರಾವಿಡ ರೀತಿಯಲ್ಲಿ ನಿರ್ಮಿಸಬೇಕೆಂದಿದ್ದ ಕೆಲವರ ಅಭಿಪ್ರಾಯವನ್ನು ಖಂಡಿಸಿ ಚೋಳರ ಮಾದರಿಯನ್ನು ಹಾಕಿಕೊಟ್ಟವರು ಶ್ರೀ ಸ್ಥಪತಿಗಳು" ಎಂದು ಪಿ. ಆರ್. ತಿಪ್ಪೇಸ್ವಾಮಿ ಅವರು ಹೇಳುತ್ತಾರೆ. (ಶಿಲ್ಪಿ ಸಂಕುಲ, ಪು 26) ಈ ವಿನ್ಯಾಸ ಅಂದಿನ ಪ್ರಜಾಮತ ವಾರಪತ್ರಿಕೆಯ ಮುಖಪುಟವನ್ನು ಅಲಂಕರಿಸಿತ್ತು. ಈ ಕಾರಣದಿಂದಾಗಿ ನಾಗೇಂದ್ರ ಸ್ಥಪತಿ ಅವರೂ ವಿಧಾನಸೌಧ ರಚನೆಯ ಸಮಿತಿಯಲ್ಲಿ ಸೇರುವಂತಾಯಿತು. ಈಗಾಗಲೇ ಇವರಲ್ಲಿ ಬಳಕೆಯಲ್ಲಿದ್ದ ಪರಿಶ್ರಮ ಹೊಂದಿದ ಪರಮೇಶ್ವರಾಚಾರ್ಯರೂ 1955ರಲ್ಲಿ ಬೆಂಗಳೂರಿಗೆ ಬಂದು ವಿಧಾನಸೌಧದ ನಿರ್ಮಾಣದಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವಂತಾಯಿತು.

ವಿಧಾನಸೌಧದ ನೆಲ ಹಾಗೂ ಮೊದಲ ಮಹಡಿಯ ವಿಶಾಲವಾದ ಮೊಗಸಾಲೆ, ದಪ್ಪನಾದ ಬೃಹದಾಕಾರದ ಕಂಬಗಳು ಹಾಗೂ ಅವುಗಳ ಮೇಲಿನ ಚಿತ್ತಾರ, ಸಭಾಸದನದ ಒಳಭಾಗ, ಹೊರಗಿರುವ ನಾಲ್ಕಾರು ಬಾಗಿಲುಗಳು ಇವುಗಳೆಲ್ಲ ಸಾಕಷ್ಟು ಕಲಾತ್ಮಕವಾಗಿರುವುದನ್ನು ಅದನ್ನು ಕಂಡವರೆಲ್ಲ ಬಲ್ಲರು. ಒಳ ಹಾಗೂ ಮೇಲ್ಛಾವಣಿಯ ಭಿತ್ತಿಯಲ್ಲಿ, ಕಂಬಗಳ ಮೇಲೆ ಅವಕಾಶ ಇರುವಲ್ಲೆಲ್ಲಾ ಗಾರೆಯ ಡಿಸೈನ್‌ಗಳು ವಿವಿಧ ನಮೂನೆಗಳಲ್ಲಿವೆ. ಅಂತೆಯೆ

ಸಭಾಸದನದ ಪ್ರವೇಶದಲ್ಲಿ ಗಂಧದ ಮರದ ಬಾಗಿಲು ಹಾಗೂ ಉಳಿದ ಹಲವಾರು ಸದನಗಳ ಪ್ರವೇಶದ್ವಾರಗಳು ಕಟ್ಟಿಗೆಯಲ್ಲಿ ರೂಪಿತವಾಗಿ ಅನೇಕ ಪೌರಾಣಿಕ ಮೂರ್ತಿಗಳಲ್ಲದೆ ಪ್ರಾಣಿ ಪಕ್ಷಿಗಳಿಂದ ನಕ್ಷೆ ಸುಳುಹು ಹೊಳಹುಗಳಿಂದ ತುಂಬಿವೆ. ಈ ಗಾರೆ ಹಾಗೂ ಮರದ ಡಿಸೈನ್‌ಗಳನ್ನು ವಿಶೇಷವಾಗಿ ಮೈಸೂರಿನ ಹಾಗೂ ಸೊರಬಾ ಸಾಗರದ ಗುಡಿಗಾರ ಶಿಲ್ಪಿಗಳಿಗೆ ನೀಡುವ ಮೇಲ್ವಿಚಾರಣೆ ಪರಮೇಶ್ವರಾಚಾರ್ಯರ ಪಾಲಿಗೆ ಬಂತು. ಅದನ್ನು ಶ್ರದ್ಧೆಯಿಂದ ಉತ್ಸಾಹದಿಂದಲೇ ನಿರ್ವಹಿಸಿದರು. ಆದರೆ ಕಲಾವಿದರಿಗಾಗಲೀ, ಶಿಲ್ಪಿಗಳಿಗಾಗಲೀ ಸ್ವತಃ ಹನುಮಂತಯ್ಯ ಅವರಿಗಾಗಲೀ, ಇಡೀ ಕಟ್ಟಡದ ರಚನೆ ತೃಪ್ತಿಯನ್ನು ತರಲಿಲ್ಲ. ಹನುಮಂತಯ್ಯ ಅವರು ಅಲ್ಲಿ ಕುರ್ಚಿಯಲ್ಲಿ ಕುಳಿತುಕೊಳ್ಳುವ ಮೊದಲೇ ಅಧಿಕಾರದಿಂದ ಇಳಿಯಬೇಕಾಯಿತು. ಅವರ ಕಲ್ಪನೆಯಲ್ಲಿ ವಿಧಾನಸೌಧದ ಪ್ರವೇಶದ್ವಾರದ ಎಡಬಲಗಳಲ್ಲಿ ನೈಜ ಅಳತೆಯ



ವಿಧಾನ ಸೌಧದಲ್ಲಿ ಡಿಸೈನ್‌ಗಳು

ಆದರೆ ಶಿಲೆಯಿಂದ ನಿರ್ಮಿಸಿದ ಆನೆಗಳನ್ನು ಇರಿಸಬೇಕೆಂದಿತ್ತು. ಅದಕ್ಕಾಗಿ ಪೀಠವನ್ನು ನಿರ್ಮಿಸಿದ್ದು ಹಾಗೇ ಇದೆ. ಮೇಲಿನ ಗೋಪುರ ಇನ್ನು 25 ಅಡಿಗಳಷ್ಟು ಎತ್ತರವಿರಬೇಕಿತ್ತು. ಅಶೋಕ ಸ್ಥಂಭದ ಕೆಳಗೆ ಸುತ್ತ ಕಟಾಂಜನವನ್ನು ನಿರ್ಮಿಸಿ ಜನ ಅಲ್ಲಿಂದ ಬೆಂಗಳೂರನ್ನು ವೀಕ್ಷಿಸುವಂತಿರ ಬೇಕೆಂಬುದು (ಲೈಟ್‌ಹೌಸ್‌ನಂತೆ) ಅವರ ಇನ್ನೊಂದು ಇಚ್ಛೆ. ಅಂತೆಯೇ ತೀರಾ ಮೇಲ್ಭಾಗದಲ್ಲಿ ಕೆಳಗಿನಿಂದ ಗೋಚರವಾಗುವಂತೆ ಒಂದುವರೆ ಪಟ್ಟು ಪುರುಷ ಪ್ರಮಾಣದಲ್ಲಿ ಗ್ರೀಕ್ ಶೈಲಿಯಲ್ಲಿ ಸ್ತ್ರೀಪುರುಷರ ವಿಗ್ರಹಗಳನ್ನು ನಿಲ್ಲಿಸಬೇಕೆಂದಿದ್ದರು. ಅಮೃತ ಶಿಲೆಯಲ್ಲಿ ಕಾವೇರಿ ಪ್ರತಿಮೆಯನ್ನೂ ಒಳ ಹೊರಗೆಲ್ಲ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಡಿಸೈನ್‌ಗಳನ್ನೂ ಮಾಡಿಸಬೇಕೆಂದು, ಕಾರ್ಯಾಲಯದ ಅವಧಿ ಮುಗಿದ ಮೇಲೆಯೂ ಜನ ಸೌಧದ ಹೊರಗೆ ವಿಶ್ರಮಿಸಿಕೊಳ್ಳುವಂತೆ, ಸುತ್ತಾಡುವಂತೆ ಕಾರಂಜಿಗಳಿಂದ ಕೂಡಿ, ವಾದ್ಯ ಸಂಗೀತದೊಂದಿಗೆ ಒಂದು ಪ್ರವಾಸಿಗರ ತಾಣದಂತೆ ಇದಾಗಬೇಕೆಂದು ಬಯಸಿದ್ದರು. ಅದು ಪೂರ್ಣ ಪ್ರಮಾಣದಲ್ಲಿ ಆಗಲಿಲ್ಲ. ಆದರೂ ಇಂದು ಸೌಧದ ಮುಂಭಾಗದಲ್ಲಿ ಅಪರೂಪಕ್ಕೆ ವಾದ್ಯಗೋಷ್ಠಿ ಆಗುವುದುಂಟು. ಇಡೀ ಸೌಧ ದೀಪಾಲಂಕಾರಗೊಳ್ಳುವುದುಂಟು. ಜನ ಬರುವುದೂ ಉಂಟು. ಇಂತಹ ಒಂದು ರಮ್ಯ ನೋಟ ಕಿಂಚಿತ್ತಾದರೂ ವಿಧಾನಸೌಧ ಒದಗಿಸುವುದೇ ಆದರೆ ಅದರ ಹಿಂದೆ ನಾಗೇಂದ್ರ ಸ್ಥಪತಿ, ಪರಮೇಶ್ವರಾಚಾರ್ಯ ಮುಂತಾದ ಕಲಾವಿದರ, ಶಿಲ್ಪಾಚಾರ್ಯರ ಪರಿಶ್ರಮ ಇರುವುದೇ ಆಗಿದೆ.

ಈಗಾಗಲೇ ಆಚಾರ್ಯರಿಗೆ ಇಪ್ಪತ್ತೇಳು ವರ್ಷವಾಗಿದ್ದು ನೆಲೆ ಕಂಡುಕೊಳ್ಳುವುದು ಅವಶ್ಯಕವಾಗಿತ್ತು. ಆ ವೇಳೆಗೆ ಕೇಂದ್ರದಿಂದ ಸ್ಥಾಪಿತವಾಗಿದ್ದ ಪ್ರಾದೇಶಿಕ ಕರಕುಶಲ ವಿನ್ಯಾಸ ಕೇಂದ್ರದಲ್ಲಿ ಮಾಸ್ಟರ್ ಕ್ರಾಫ್ಟ್ ಮೆನ್ ಆಗಿ ಉದ್ಯೋಗ ದೊರೆತು ಬೆಂಗಳೂರಿನಲ್ಲಿಯೇ ನೆಲೆನಿಂತರು.

## ಹಸ್ತ ಕೌಶಲ್ಯ

ವಿನ್ಯಾಸ ಕೇಂದ್ರದಲ್ಲಿದ್ದ ಇಪ್ಪತ್ತೆಂಟು ವರ್ಷಗಳು ಆಚಾರ್ಯರು ತಾವು

ಸ್ವತಃ ಅನೇಕ ಸಂಗತಿಗಳನ್ನು ಕಲಿಯುವಂತಾಗಿದ್ದಲ್ಲದೆ ಸಾವಿರಾರು ಅಭ್ಯರ್ಥಿಗಳಿಗೆ ಕಲಿಸಿಕೊಟ್ಟರು. ರಾಜ್ಯ, ರಾಷ್ಟ್ರವನ್ನು ಮೀರಿ ಅಂತರ ರಾಷ್ಟ್ರೀಯ ಮಟ್ಟಕ್ಕೆ ಹೋಗುವಂತಾಗಿದ್ದು ಈ ಕೇಂದ್ರದ ನೆಲೆಯಿಂದಾಗಿಯೇ. ಕೇಂದ್ರದಲ್ಲಿ ನಿಯೋಜಿಸಿದಂತಹ ಕಾರ್ಯಗಳು ಹಲವಾರು ಬಗೆಯವು. ಕರ್ನಾಟಕದ ಕಡಲ ತೀರದವರೇ ಆದ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲುಗೊಂಡು ಸ್ವಾತಂತ್ರ್ಯಾನಂತರ ದೇಶದ ಕಲೆ ಹಾಗೂ ಸಂಸ್ಕೃತಿಯ ಬಗ್ಗೆ ಆಳವಾಗಿ ಚಿಂತಿಸತೊಡಗಿದರು. ದೇಶೀಯವೆನಿಸಿದ ಅನೇಕ ಪರಂಪರಾಗತ ಚಿತ್ರ, ಶಿಲ್ಪ ಕಲೆಗಳು, ಜನಪದ ಪ್ರಕಾರದ ಕಲಾಕೃತಿ ರಚನೆಗಳು ತೀರ ಅಳಿವಿನ ಅಂಚಿಗೆ ಬಂದಿದ್ದನ್ನು ಗುರುತಿಸಿದರು. ಅವರು ಸ್ವದೇಶೀವಾದವನ್ನು ಬೇರೊಂದು ರೀತಿಯಲ್ಲಿ ಅರ್ಥೈಸಿದರು. ದೇಶೀಯ ಪದಾರ್ಥಗಳ ತಯಾರಿಕೆ, ಬಳಕೆಗಳು ಸ್ವಾವಲಂಬನೆಯ ಜೊತೆಗೆ ರಾಷ್ಟ್ರೀಯತಾ ಭಾವನೆಯನ್ನು ಬೆಳೆಸುತ್ತದೆ ಎಂಬ ಅರಿವು ಅವರಿಗೆ ಇತ್ತು. ಗಾಂಧೀಜಿ ಅವರ ಕನಸು ಸಹ ಅದೇ ಆಗಿತ್ತು. ಕಲಾವಿದರನ್ನು, ಕಲೆಯನ್ನು ಅರಸುತ್ತಾ ನಾಡಿನ ಮೂಲೆ ಮೂಲೆಗಳಲ್ಲೆಲ್ಲಾ ಸುತ್ತಾಡಿದರು. ಕಲಾವಿದರ ಸ್ಥಿತಿಗತಿಗಳನ್ನು ತಿಳಿದು ಅವರಿಗೆ ಸಾಂತ್ವನ ಹೇಳಿ ಧೈರ್ಯ, ಸ್ವಾಭಿಮಾನ ತುಂಬಿ ಕೃತಿಗಳ ಬಗ್ಗೆ ಹೆಮ್ಮೆ ಮೂಡಿಸುತ್ತಿದ್ದರು. ಕಲೆಗೆ ಕಲಾವಿದರಿಗೆ ಗೌರವ ತಂದುಕೊಟ್ಟರು. 1952ರಲ್ಲಿ ಕರಕುಶಲ ಕೈಗಾರಿಕೆಗಳ ಸಮಿತಿಗೆ ಅಧ್ಯಕ್ಷರಾದರು. ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪ್ರಾದೇಶಿಕ ವಿನ್ಯಾಸ ಕೇಂದ್ರಗಳನ್ನು ತೆರೆಯುವಂತೆ ಮಾಡಿದರು. ಅದರಂತೆ ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ಉಸ್ತುವಾರಿಗೆ ಬೆಂಗಳೂರಿನಲ್ಲಿ ಕೇಂದ್ರ ತೆರೆಯಲಾಯಿತು. ಇಲ್ಲಿಗೆ ಪರಮೇಶ್ವರಾಚಾರ್ಯರಂಥ ನುರಿತ ಕಲಾವಿದರನ್ನು ಆಯ್ಕೆ ಮಾಡಿದ್ದು ನಿಗಮದ ಹಾಗೂ ಕಮಲಾ ದೇವಿಯವರ ದೂರ ದರ್ಶಿತ್ವವನ್ನು ತೋರಿಸುತ್ತದೆ. ಅಂತೆಯೇ ಆಚಾರ್ಯರು ನಿಗಮದ ಮುಖ್ಯ ಕಾರ್ಯವಾಗಿದ್ದ ನಶಿಸಿ ಹೋಗುತ್ತಿದ್ದ ಸಾಂಪ್ರದಾಯಿಕ ಕಲಾ ಪ್ರಕಾರಗಳನ್ನು ಗುರುತಿಸಿ ಅವುಗಳ ನಕಲು ಮಾಡುವ ಕಾರ್ಯವನ್ನು ಕೈಗೊಂಡರು. ಅದಕ್ಕಾಗಿ ಕರ್ನಾಟಕವು ಸೇರಿದಂತೆ ದಕ್ಷಿಣ

ಮತ್ತು ಉತ್ತರ ರಾಜ್ಯಗಳಲ್ಲಿ ವ್ಯಾಪಕವಾಗಿ ಸಂಚರಿಸಿದರು. ನಿಗಮಕ್ಕೆ ಹಲವಾರು ಉಪಯುಕ್ತ ಸಲಹೆಗಳನ್ನು ವಿನ್ಯಾಸಗಳನ್ನೂ ನೀಡಿದರು.

ದಕ್ಷಿಣ ಕನ್ನಡ ಜಿಲ್ಲೆಯವರೇ ಆದ ಕಮಲಾದೇವಿ ಅವರಿಗೆ ಕುಂದಾಪುರದ ಬಳಿಯ ಮೆಕ್ಕೆಕಟ್ಟುವಿನ 'ಉರು'ಗಳ ಬಗ್ಗೆ ಅಪಾರ ಕುತೂಹಲವಿದ್ದು ಅವುಗಳನ್ನು ಉಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ಡಿಸೈನ್ ಸೆಂಟರಿನಲ್ಲಿದ್ದ ಪರಮೇಶ್ವರಾಚಾರ್ಯರೂ ಸೇರಿದಂತೆ ತಂಡವೊಂದನ್ನು ರಚಿಸಿ ಆಯ್ದ 'ಉರು'ಗಳನ್ನು ನಕಲು ಮಾಡಿಸತೊಡಗಿದರು. ನಮ್ಮ ಪಶ್ಚಿಮ ಕರಾವಳಿಯಲ್ಲಿ ಅನೇಕ ಭೂತಗಳನ್ನು ದೈವಗಳೆಂದು ಪೂಜಿಸುವ ಪದ್ಧತಿಯಿದೆ. ಇವಲ್ಲಿ ಹಲವಾರನ್ನು ಕಟ್ಟಿಗೆಯಲ್ಲಿ ಮಾಡಿಸಿರುತ್ತಾರೆ. ಇವುಗಳಲ್ಲಿ ಮನುಷ್ಯರು ಪ್ರಾಣಿಗಳು ಹಾಗೂ ಇವೆರಡರ ಮಿಶ್ರಣಗಳನ್ನು ಕಾಣಬಹುದು. ಇವುಗಳಿಗೆ ಪ್ರಾದೇಶಿಕವಾಗಿ 'ಉರು' ಎಂದು ಕರೆಯುತ್ತಾರೆ. ಉರು ಎಂಬ ಪದ 'ರೂಹು' 'ರೂಪ' ಎಂಬುದರಿಂದ ಬಂದಿದೆಯೆಂದು ಕೆಲವರ ಅಭಿಪ್ರಾಯ. (ತುಳುವರ ಆಚರಣೆಯಲ್ಲಿ... ಪು. 39) ಆದರೆ ಕಟ್ಟಿಗೆಗೆ, ಉರಿಗಾಗಿ ಬಳಸುವ ಸೌದೆಗೆ 'ಉರುವಲು' ಎಂಬ ಪದ ಪ್ರಯೋಗವು ಇದ್ದು, ಇವು ಕಟ್ಟಿಗೆಯ ಶಿಲ್ಪವಾದ್ದರಿಂದ 'ಉರು' ಎಂಬ ಹೆಸರು ಬಂದಿರಬಹುದು.

## ಪ್ರತಿಕೃತಿ ನಿರ್ಮಾಣ

'ಉರು'ಗಳು ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಹಲವಾರು ಕಡೆಗಳಲ್ಲಿ ಚದುರಿದಂತೆ ಇದ್ದರೂ ಉಡುಪಿ ತಾಲೂಕಿನ ಬಾರಕೂರು ಬಳಿ ಇರುವ ಮೆಕ್ಕೆಕಟ್ಟೆಯಲ್ಲಿ ಒಂದರಲ್ಲೇ ಒಂದೇ ಎಡೆಗೆ 150ಕ್ಕೂ ಹೆಚ್ಚು ಉರುಗಳು 4 ರಿಂದ 5 ಶತಮಾನ ಹಳೆಯದಾದ ಎರಡರಿಂದ ಇಪ್ಪತ್ತು ಅಡಿ ಎತ್ತರದ, ವಿವಿಧ ಭಾವ ಭಂಗಿಗಳಲ್ಲಿ ಇರುವುದು ಕಾಣಬಹುದು. ಇವುಗಳಿಗೆ ಹಲವಾರು ಐತಿಹ್ಯಗಳೂ ಇವೆ. ಇವುಗಳಲ್ಲಿ ಬಹಳಷ್ಟು ಉರುಗಳು ಬಣ್ಣ ಮಾಸಿ ಗೆದ್ದಲು ತಿಂದು ಹಾಳಾಗಿದ್ದು, ಕೆಲವನ್ನು ಪ್ರತಿಕೃತಿ ನಿರ್ಮಿಸಲು ಆರಿಸಲಾಯಿತು. ಈ ಕಾರ್ಯ ಕಮಲಾದೇವಿ ಅವರ ನೇತೃತ್ವದಲ್ಲೇ 1963-64ರ ವೇಳೆಯಲ್ಲಿ 40,000 ರೂ.ಗಳ ಅಂದಾಜಿನಲ್ಲಿ ದೆಹಲಿಯ ಕರಕುಶಲ

ಮ್ಯೂಸಿಯಂ ವತಿಯಿಂದ ಕಾರ್ಯ ನಿರ್ವಹಿಸಲಾಯಿತು. ನಿಗಮದ ಅಧ್ಯಕ್ಷ ಸೇನ್ ಗುಪ್ತರ ನಿರ್ದೇಶನದಲ್ಲಿ ಒರಿಸ್ಸಾ, ಬಿಹಾರ್, ಆಂಧ್ರ ಪ್ರದೇಶ, ಕರ್ನಾಟಕದ ಕಿನ್ನಾಳ ಇತ್ಯಾದಿ ಕಡೆಗಳಿಂದ ಇಪ್ಪತ್ತೈದು ಕಲಾವಿದರನ್ನು ಆರಿಸಲಾಯಿತು. ಒಂದು ವರ್ಷಗಳಷ್ಟು ದೀರ್ಘ ಕಾಲಾವಧಿಯಲ್ಲಿ ಕೆಲವು ಕಲಾವಿದರು ಕುಟುಂಬ ಸಮೇತ ಇಲ್ಲಿ ನೆಲೆಸಿದ್ದು ಹಲವಾರು ಕೃತಿಗಳನ್ನು ಪುನರ್ ಪ್ರತಿ ಮಾಡಿದರು. ಪ್ರತಿಕೃತಿಗಳನ್ನು ಮೆಕ್ಕೆಕಟ್ಟೆಯಲ್ಲಿಯೇ ಇರಿಸಿ ಮೂಲ ಕೃತಿಗಳನ್ನು ದೆಹಲಿಯ ರಾಷ್ಟ್ರೀಯ ಕರಕುಶಲ ಪ್ರದರ್ಶನಾಗಾರಕ್ಕೆ ಜೂನ್ 1965ರಲ್ಲಿ ಕಳಿಸಲಾಗಿದ್ದು ಅವು ಇಂದು ಅಲ್ಲಿ ಆಕರ್ಶಕ ರೀತಿಯಲ್ಲಿ ಪ್ರದರ್ಶಿತಗೊಂಡಿವೆ. ಇದೇ ವೇಳೆಯಲ್ಲಿ ಅಲ್ಲಿಯ ಕೆಲವು ಕೃತಿಗಳನ್ನು ಚಿಕ್ಕ ಅಳತೆಯಲ್ಲಿ ಪ್ರತಿ ರೂಪಿಸಲಾಯಿತು. ಪರಮೇಶ್ವರಾಚಾರ್ಯರು ಒಂದೇ ವಾರದಲ್ಲಿ ಈ ಬಗೆಯ ಎರಡು ಕಿರು ಅಳತೆಯ ಮೂರ್ತಿಗಳನ್ನು ಮಾಡಿ ಎಲ್ಲರ ಮೆಚ್ಚುಗೆಗಳಿಸಿದರು. ನಿಗಮದ ಅಧ್ಯಕ್ಷ ಭಂಡಾರಿ ಅವರು 'ಈ ಬಗೆಯಲ್ಲಿ ಕೃತಿಗಳನ್ನು ರಚಿಸಿದಲ್ಲಿ ಇವು ಜನಸಾಮನ್ಯರಿಗೂ ತಲಪಬಹುದೆಂದು' ಅಭಿಪ್ರಾಯಪಟ್ಟರು. ಇದೇ ಅವಧಿಯಲ್ಲಿ ಎಂದರೆ 1965ರಲ್ಲಿ ಆಚಾರ್ಯರು ರಚಿಸಿದ ನವಗ್ರಹಗಳಲ್ಲಿ ಶುಕ್ರ ಗ್ರಹ ದೇವತೆಯ ಕಾಷ್ಠ ಶಿಲ್ಪಕ್ಕೆ ಆಗಷ್ಟೇ ಸ್ಥಾಪಿಸಿದ್ದ ರಾಷ್ಟ್ರ ಪ್ರಶಸ್ತಿ ರಾಜ್ಯಕ್ಕೆ ಪ್ರಥಮವಾಗಿ ಇವರಿಗೆ ದೊರೆಯಿತು. ಮರುವರ್ಷ 1966ರಲ್ಲಿ ರಾಜ್ಯ ಪ್ರಶಸ್ತಿಯೂ ದೊರೆಯಿತು.

ಪರಮೇಶ್ವರಾಚಾರ್ಯರು ಡಿಸೈನ್ ಸೆಂಟರಿನಲ್ಲಿದ್ದಾಗ ನಡೆದ ಇನ್ನೊಂದು ಪ್ರಮುಖ ಕಾರ್ಯಾಗಾರವೆಂದರೆ 'ಅಖಿಲ ಏಷ್ಯಾ ಖಂಡದ ಕರಕುಶಲ ಶಿಲ್ಪಿಗಳ ಪ್ರಥಮ ಕಾರ್ಯಾಗಾರ'. ಬೆಂಗಳೂರಿನಲ್ಲಿ ಏಪ್ರಿಲ್ ಮೇ 1980ರಲ್ಲಿ ನಡೆದ ಈ ಶಿಬಿರಕ್ಕೆ ಹದಿನೈದು ದೇಶಗಳ ಎಪ್ಪತ್ತಕ್ಕೂ ಹೆಚ್ಚು ಪ್ರತಿನಿಧಿಗಳು ಬಂದಿದ್ದರು. ಎಂದಿನಂತೆ ಕಮಲಾದೇವಿ ಅವರ ನೇತೃತ್ವವಿದ್ದು ಇಲ್ಲಿಯವರೇ ಆದ ಪರಮೇಶ್ವರಾಚಾರ್ಯರದೂ ಮುಖ್ಯ ಪಾತ್ರವಾಗಿತ್ತು. ಅವರೂ ಕೆಲವು ಮರದ ವಿಗ್ರಹಗಳನ್ನು ರೂಪಿಸಿದರು. ಈ ಕಾರ್ಯಾಗಾರದ ಬಗ್ಗೆ ಸುಧೀರ್ಘವಾಗಿ ವರದಿ ಮಾಡಿರುವ ಸಂಧ್ಯಾರಾವ್

ಅವರು ಪರಮೇಶ್ವರಾಚಾರ್ಯರ ಕೃತಿಯಲ್ಲಿದ್ದ ಸೌಂದರ್ಯದ ಬಗ್ಗೆ ತಿಳಿಸುತ್ತಾ ಇದಕ್ಕಿಂತ ಎಷ್ಟೋ ಕೆಳಮಟ್ಟದಲ್ಲಿದ್ದ, ಕಳಪೆ ಎನಿಸಿದ್ದ, ಆಚಾರ್ಯರಿಗಿಂತ ತೀರ ವಿಳಂಬವಾಗಿ ಪೂರೈಸುತ್ತಿದ್ದ, ಉಳಿದವರು ಇರಿಸಿದ್ದಕ್ಕಿಂತ ಹೆಚ್ಚಿನ ಮೊತ್ತವನ್ನು ಕೃತಿಗೆ ಇರಿಸಿದ್ದ ಭೂತಾನ್ ರಾಜ್ಯದ ಕಲಾವಿದನ ಬಗ್ಗೆ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ. (ದ ಸಿಟಿ ಟ್ಯಾಬ್ 1980)

**ಕಾರ್ಯಸಕ್ತ**

ಅದೇ ವರ್ಷ ಎಂದರೆ 1980ರ ನವೆಂಬರ್‌ನಲ್ಲಿ ದೆಹಲಿಯ ಪ್ರಗತಿ ಮೈದಾನದಲ್ಲಿ ಎರಡನೇ ರಾಷ್ಟ್ರೀಯ ಕರಕುಶಲ ಮೇಳ ಮೂರುವಾರಗಳ ಕಾಲ, ರಾಷ್ಟ್ರದ ಎಲ್ಲ ಭಾಗಗಳಿಂದ ಬಂದಿದ್ದ ಕಲಾವಿದರುಗಳಿಂದ ಒಡಗೂಡಿ ನಡೆದಿದ್ದು ಪರಮೇಶ್ವರಾಚಾರ್ಯರೂ ಪಾಲುಗೊಂಡು ಕೃತಿರಚನೆ ಮಾಡಿದರು.

ವಿನ್ಯಾಸ ಕೇಂದ್ರದಲ್ಲಿ ಕೆಲವೊಮ್ಮೆ ಕೇಂದ್ರ ಸಂಸ್ಥೆಯಿಂದ ಇಲ್ಲವೆ ವ್ಯಕ್ತಿಗಳಿಂದ ಕೃತಿಗಳಿಗೆ-ಬೇಡಿಕೆಯಿದ್ದು ಅವನ್ನು ಪೂರೈಸಬೇಕಿತ್ತು. ದೇಶದ ವಿವಿಧ ಭಾಗಗಳಿಂದ ಆರಿಸಿದ ಅಭ್ಯರ್ಥಿಗಳಿಗೆ ಇಲ್ಲಿ ತರಬೇತಿ ನೀಡಲಾಗುತಿತ್ತು. ಅಲ್ಲದೆ ಪ್ರತಿವರ್ಷ ಆರಿಸಿದ ಒಂದು ಮಾಧ್ಯಮದ ಬಗ್ಗೆ ವಿಶೇಷವಾಗಿ ಕಾರ್ಯಾಗಾರ, ಶಿಬಿರ, ಪ್ರಾತ್ಯಕ್ಷಿಕೆ, ಉಪನ್ಯಾಸ ಇತ್ಯಾದಿಗಳನ್ನು ವಿವಿಧ ಪ್ರದೇಶಗಳಲ್ಲಿ ಇರಿಸಲಾಗುತಿತ್ತು. ಇದೇ ರೀತಿ ದೇಶ ವಿದೇಶಗಳಲ್ಲಿ ನಡೆಯುತ್ತಿದ್ದ ಶಿಬಿರ, ಕಾರ್ಯಾಗಾರ, ಪ್ರದರ್ಶನಗಳಿಗೆ ಹೋಗುವ ಅವಕಾಶವೂ ಆಚಾರ್ಯರಿಗೆ ದೊರೆಯಿತು. ಅಲ್ಲದೆ ನಿಗಮದ ನೌಕರರು ಕಾರ್ಯಾಲಯದ ಅವಧಿಯ ನಂತರ ಅಥವ ಬಿಡುವಿನ ದಿನಗಳಲ್ಲಿ ತಮ್ಮ ಸ್ವಂತ ಬೇಡಿಕೆಯ ಕೃತಿಗಳನ್ನು ಮಾಡಿ ಬಿಕರಿ ಮಾಡಬಹುದಿತ್ತು. ಸ್ಪರ್ಧೆಗಳಿಗೆ ಕಳಿಸಬಹುದಿತ್ತು. ಈ ಎಲ್ಲದರ ಪ್ರಯೋಜನವನ್ನು ಪರಮೇಶ್ವರಾಚಾರ್ಯರು ಯಶಸ್ವಿಯಾಗಿ ಪಡೆದರಲ್ಲದೆ, ಸುಮಾರು ಎಲ್ಲ ಪ್ರತಿಷ್ಠಿತ ಪ್ರಶಸ್ತಿಗಳನ್ನು ಗಳಿಸಿದರು. ತಮ್ಮ 58ನೇ ವಯಸ್ಸಿನಲ್ಲಿ ಎಂದರೆ 1985ರಲ್ಲಿ ಡಿಸೈನ್ ಸೆಂಟರ್‌ನಿಂದ ನಿವೃತ್ತರಾದರು.



ಕೃಷ್ಣದೇವರಾಯ



ಸತ್ಯೇಂದ್ರ ಚೋಳನ 'ನ್ಯಾಯದ ಗಂಟೆ'

ಬುದ್ಧ ಪರಿವಾರ

ಜೈನ ರಾಜರು, ಪಾರ್ಶ್ವನಾಥ ತೀರ್ಥಂಕರನ
ಜನ್ಮಕ್ಕಾಗಿ ಪ್ರಾರ್ಥನೆಗೈಯುವುದು.

ಕೇಂದ್ರ ಕರಕುಶಲ ನಿಗಮದಲ್ಲಿದ್ದಾಗಲೇ ಅಲ್ಲಿಯ ಕೆಲವು ಸಮಿತಿಗಳಿಗೆ ಸಲಹೆಗಾರರಾಗಿದ್ದರು. ಈಗ ನಿವೃತ್ತರಾದ ಮೇಲೂ ನಿಗಮವೂ ಸೇರಿದಂತೆ ಕರ್ನಾಟಕ ಕ್ರಾಫ್ಟ್ ಕೌನ್ಸಿಲ್‌ಗೂ ಸಲಹಾ ಸಮಿತಿಯ ಸದಸ್ಯರಾಗಿ ಮುಂದುವರಿಯುತ್ತಿದ್ದಾರೆ. ಅಲ್ಲದೆ ಈ ಎರಡೂ ಕಡೆಗಳಲ್ಲಿ ಆಗಾಗ್ಗೆ ಪ್ರಾತ್ಯಕ್ಷಿಕೆ, ಉಪನ್ಯಾಸಗಳಿಗೆ ಕರೆ ಬರುತ್ತಿದ್ದು ಅವುಗಳನ್ನು ನಿರ್ವಹಿಸುತ್ತಾರಲ್ಲದೆ ಚನ್ನಪಟ್ಟಣದ ಗಂಗರಸ ಶಿಲ್ಪ ಕಲಾ ಶಿಕ್ಷಣ ಕೇಂದ್ರದ ಸಲಹಾ ಸಮಿತಿಯಲ್ಲಿ 1992ರಿಂದ ಇದ್ದಾರೆ. ಅಲ್ಲಲ್ಲಿ ನಡೆಯುವ ಕಲಾಶಿಬಿರ, ಕಾರ್ಯಾಗಾರಗಳಲ್ಲಿ ಇಂದಿಗೂ ಪಾಲುಗೊಳ್ಳುತ್ತಾರೆ.

## ನಿವೃತ್ತಿಯನಂತರ

ಪರಮೇಶ್ವರಾಚಾರ್ಯರು ನಿವೃತ್ತರಾದ ಮೇಲೆ ಸುಮಾರು ಹತ್ತು ವರ್ಷಗಳು ತಮ್ಮಷ್ಟಕ್ಕೆ ಶಿಲ್ಪ ರಚನೆಯನ್ನು ಮಾಡುತ್ತಿದ್ದು 1995ರಲ್ಲಿ ಶಿಲ್ಪಕಲಾ ಅಕಾಡೆಮಿ ರಚಿತವಾದಾಗ ಅದರ ಸಕ್ರಿಯ ಸದಸ್ಯರೂ ಆದರು. ಮತ್ತೆ ಆಚಾರ್ಯರು ಕಾರ್ಯ ಪ್ರವೃತ್ತವಾದುದು ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ. ಅದೂ ಒಂದು ಒಳ್ಳೆಯ ಕೆಲಸಕ್ಕಾಗಿ. ಆದರೆ ಅದು ಯಶಸ್ವಿಯಾಗದೇ ಹೋದುದು ದುರ್ದೈವ. ಹಂಪಿಯಲ್ಲಿ ಗುರುಕುಲ ಮಾದರಿಯಲ್ಲಿ ಶಿಲ್ಪ ಶಾಲೆಯೊಂದನ್ನು ತೆರೆಯಲಾಯಿತು. ಶಿಲ್ಪ ಕಲೆಗೆ ಗುರುಕುಲ ಮಾದರಿಯೇ ಹೆಚ್ಚು ಸೂಕ್ತ ಎಂಬುದು ತಿಳಿದ ವಿಷಯವೇ ಆಗಿದ್ದು ಆಚಾರ್ಯರನ್ನು ಸಂದರ್ಶಕ ಪ್ರಾಧ್ಯಾಪಕ ಹಾಗೂ ವಿಭಾಗದ ಮುಖ್ಯಸ್ಥರಾಗಿ ಆಯ್ಕೆ ಮಾಡಿದ್ದು ರಾಜ್ಯದ ವಿವಿಧ ಭಾಗಗಳಿಂದ ಹತ್ತಾರು ವಿದ್ಯಾರ್ಥಿಗಳೂ ಬಂದರು. 1997ರಲ್ಲಿ ಕಾರ್ಯಾರಂಭವಾದರೂ ಹಲವಾರು ಕಾರಣಗಳಿಂದ ಏಳೆಂಟು ತಿಂಗಳುಗಳಲ್ಲೇ ಆಚಾರ್ಯರು ಮರಳಿ ಬೆಂಗಳೂರಿಗೆ ಬರಬೇಕಾಯಿತು.

ಆದರೂ ಅಲ್ಲಿ ಮೂರು ವರ್ಷಗಳ ತರಬೇತಿಗಾಗಿ ಪಠ್ಯಕ್ರಮವೊಂದನ್ನು ರೂಪಿಸಿದ್ದು ಅದರಲ್ಲಿ ಆಚಾರ್ಯರ ದೂರ ದೃಷ್ಟಿಯನ್ನು ಕಾಣಬಹುದು.

ಮೊದಲ ವರ್ಷ ಶಿಲಾ ಇತ್ಯಾದಿ ಮಾಧ್ಯಮಗಳ ಪರೀಕ್ಷೆ, ಹೂಬಳ್ಳಿ, ಪ್ರಾಣಿ ಸಂಕುಲಗಳ ರಚನೆ, ಪೂಜೋಪಕರಣ, ಗೃಹೋಪಕರಣಗಳ ತಯಾರಿಕೆ, ಅಭ್ಯಾಸ ಮತ್ತು ಚರ್ಚೆ, ಎರಡನೇ ವರ್ಷ ಶಾಸ್ತ್ರಗ್ರಂಥಗಳ ಪರಿಚಯ ಜ್ಯೋತಿಷ್ಯ, ತಾಳಮಾನಗಳ ಅಭ್ಯಾಸ, ಪ್ರಧಾನಾಂಗ, ಉಪಾಂಗಗಳ ರೇಖಾ ಚಿತ್ರ ರಚನೆ, ಅಂಗಭಂಗಿಗಳ ವೈವಿಧ್ಯ ಹಾಗೂ ವಿಗ್ರಹ ರೂಪಿಸಲು ಕಲಿಸುವಿಕೆ. ಶಿಲಾ, ಕಾಷ್ಠ, ಲೋಹ, ದಾರು ಹಾಗೂ ಸುಧಾಗಳಲ್ಲಿ ಯಾವುದಾದರೂ ಒಂದು ಮಾಧ್ಯಮದ ಆಯ್ಕೆ ಮಾಡಿಕೊಳ್ಳುವಂತಿದ್ದು ಅದರ ಬಗ್ಗೆ ಪೂರ್ಣ ತಿಳುವಳಿಕೆ ನೀಡುವಿಕೆ; ಮೂರನೆಯ ವರ್ಷದಲ್ಲಿ ವಾಸ್ತು ಶಿಲ್ಪ, ದೇವಾಲಯ ನಿರ್ಮಾಣ ದೇವಾಲಯಕ್ಕೆ ಸಂಬಂಧಿಸಿದ ವಿಗ್ರಹಗಳು ಇತ್ಯಾದಿ ವಿಷಯಗಳ ತಿಳುವಳಿಕೆ, ಧ್ಯಾನ ಶ್ಲೋಕ ಅನುಸರಿಸಿ ದೇವತಾ ಮೂರ್ತಿಗಳ ರೇಖಾ ಚಿತ್ರ ರಚನೆಗಳಲ್ಲದೆ ಇನ್ನೂ ಹೆಚ್ಚಿನ ಪರಿಶ್ರಮ ಬಯಸಿದಲ್ಲಿ ಬಿಂಬಗಳಿಗೆ ಜೀವನ್ಯಾಸ, ನೇತ್ರೋನ್ಮಿಲನ ಮಾಡಿ ಕುಂಭಾಭಿಷೇಕದವರೆಗೂ ತಿಳುವಳಿಕೆ ನೀಡುವುದು, ವೇದಾಗಮ ಮಂತ್ರ ತಂತ್ರಗಳ ಅಧ್ಯಯನ, ಕ್ರಮ ಬದ್ಧ ಶಿಕ್ಷಣ ಇತ್ಯಾದಿ ನೀಡಿ ಸ್ಥಪತಿಗಳನ್ನಾಗಿ ಮಾಡುವುದು.

ಇತ್ಯಾದಿಯಾಗಿ ಪರಿಪೂರ್ಣವಾದ ಪಠ್ಯವಿಷಯವನ್ನು ಆಚಾರ್ಯರು ಅಳವಡಿಸಿದರು.

ಈ ಮಧ್ಯೆ ಕಳೆದ ಹತ್ತು ವರ್ಷಗಳಲ್ಲಿ ಹಂಪಿಯ ವಿಶ್ವವಿದ್ಯಾಲಯವೂ ಸೇರಿದಂತೆ, ಕರಕುಶಲ ಕೇಂದ್ರ, ಶಿಲ್ಪ ಅಕಾಡಮಿ ಇತ್ಯಾದಿಗಳು ಹಲವಾರು ಕಾರ್ಯಾಗಾರ, ಶಿಬಿರಗಳನ್ನು ಏರ್ಪಡಿಸಿದ್ದು ಪರಮೇಶ್ವರಾಚಾರ್ಯರ ಸಕ್ರಿಯ ಪಾತ್ರ ಇದ್ದೇ ಇತ್ತು. 1992ರ ಫೆಬ್ರವರಿಯಲ್ಲಿ ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ಕಲಾವಿದರ ಶಿಬಿರ ಬೆಂಗಳೂರು ನಡೆಯಿತು. ವಿಚಾರ ಸಂಕಿರಣ, ಉಪನ್ಯಾಸ, ಪ್ರದರ್ಶನ, ಸಾಕ್ಷಚಿತ್ರಗಳ ಪ್ರದರ್ಶನಗಳಿದ್ದು ಕಾರ್ಯಾಗಾರದ ನಿರ್ದೇಶನ ಆಚಾರ್ಯರದಾಗಿತ್ತು. ಶಿಲ್ಪಕಲಾ ಅಕಾಡೆಮಿ ಆರಂಭವಾದ ಮೇಲೆ 1995 ರಿಂದ ಪ್ರತಿವರ್ಷವೂ ಶಿಲ್ಪಕಲೆ ಕುರಿತ ಕಾರ್ಯಾಗಾರ, ಶಿಬಿರ, ಪ್ರದರ್ಶನ ಇತ್ಯಾದಿಗಳು ಯಶಸ್ವಿಯಾಗಿ ನಡೆಯುತ್ತಿದ್ದು ಅಕಾಡೆಮಿಯ ಉತ್ಸಾಹಿ




'ಲಕ್ಷ್ಮೀವರಾಹ'

ಸದಸ್ಯರಾದ ಪರಮೇಶ್ವರಾಚಾರ್ಯರ ಮಾರ್ಗದರ್ಶನ ಇದ್ದೇ ಇರುತ್ತದೆ. 1986ರಲ್ಲಿ ಸಾರ್ಕ್ ಸಮ್ಮೇಳನದಲ್ಲಿ ಭಾಗವಹಿಸಿದ್ದರು. 1984ರಲ್ಲಿ ಕೈವಾರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸನ್ಮಾನಿತರಿಗೆ ಗಂಧದ ಮರದಲ್ಲಿ 18 ರಥಗಳನ್ನು ರೂಪಿಸಿಕೊಟ್ಟರು.

## ಪ್ರಶಸ್ತಿಗಳು/ಸನ್ಮಾನಗಳು

ಒಬ್ಬ ಕಲಾವಿದನ ಸೇವೆಯನ್ನು ಜನ ಹಾಗೂ ಸರ್ಕಾರಗಳು ಗುರುತಿಸಿದಾಗ ಆತನಿಗೆ ಇನ್ನೂ ಹೆಚ್ಚಿನ ಸ್ಫೂರ್ತಿ ಬರುವುದಲ್ಲದೆ ಇನ್ನೂ ಉತ್ತಮವಾದ ಕಲಾಕೃತಿಗಳನ್ನು ಸಮಾಜಕ್ಕೆ ನೀಡುತ್ತಾನೆ. ಅಂತೆಯೆ ಸಿ. ಪರಮೇಶ್ವರಾಚಾರ್ಯರಿಗೆ ದೊರೆತಿರುವ ಪ್ರಶಸ್ತಿಗಳು ಹಾಗೂ ಅವರಿಂದ ರಚಿತವಾಗಿರುವ ಕಲಾಕೃತಿಗಳನ್ನು ಜೊತೆಯಲ್ಲಿ ಇರಿಸಿ ನೋಡಿದಾಗ ಈ ಮಾತು ಸ್ಪಷ್ಟವಾಗುತ್ತದೆ. ಆಚಾರ್ಯರ ಬಗ್ಗೆ ಬರೆದಿರುವವರೆಲ್ಲ ಅವರ ಬುದ್ಧಿಶಕ್ತಿ, ಎಲೆ ಮರೆಯ ಕಾಯಿಯಂತಹ ಜೀವನದ ಬಗ್ಗೆ ಹೇಳಿಯೇ ಇದ್ದಾರೆ. ಇವರ ಸಂದರ್ಶನ ಮಾಡಿದ ಬಿ.ವಿ.ಕೆ. ಶಾಸ್ತ್ರೀ ಅವರು "ತಮ್ಮ ವಿಷಯ ಹೇಳಿಕೊಳ್ಳುವುದಕ್ಕೂ ಸಂಕೋಚ, ಹೇಳಿದರೆ ಸರಿಯೋ ತಪ್ಪೋ ಎಂಬ ಆತಂಕ" ಎನ್ನುತ್ತಾರೆ (ಸುಧಾ 1971) "ಪರಮೇಶ್ವರಾಚಾರ್ಯರು ಪ್ರಚಾರ ಪ್ರಿಯರಲ್ಲ. ಪ್ರಚಾರದ ಅಲೆಯ ಯಾವ ಸುಳಿಗೂ ಸಿಗದೆ ಎಲೆ ಮರೆಯ ಕಾಯಿಯಂತೆ ಇದ್ದು ಕಲಾ ಪರಿಮಳ ಬೀರುತ್ತಾ ಬಂದಿರುವ ಇವರ ಪ್ರತಿಭೆ ಬಹುಮುಖ" ಎಂದು ತಿಪ್ಪೇಸ್ವಾಮಿ ಅವರು ಅಭಿಪ್ರಾಯ ಪಡುತ್ತಾರೆ (ಶಿಲ್ಪಿ ಸಂಕುಲ, ಪು. 100) ಸ್ವತಃ ಆಚಾರ್ಯರೇ ಆಕಾಶ ವಾಣಿಯ ಸಂದರ್ಶನದಲ್ಲಿ "ನಾನು ಹಣಕ್ಕಾಗಿ ಎಂದೂ ಶಿಲ್ಪ ಮಾಡಲಿಲ್ಲ. ಅದೊಂದು ಕಲಾಕೃತಿ ಎಂಬಂತೆ ಶಿಲ್ಪ ರಚಿಸಿದೆ. ಹಾಗೆಂದೇ ನನಗೆ ಹಲವಾರು ಪ್ರಶಸ್ತಿಗಳು ಲಭ್ಯವಾಗು ವಂತಾಯಿತು" ಎಂದಿದ್ದಾರೆ. ದಿಟ, ಅವರೆಂದೂ ತಮ್ಮ ಕೃತಿಗಳಲ್ಲಿ ಕಲಾವಂತಿಕೆಯನ್ನು ಬಿಟ್ಟುಕೊಟ್ಟಿಲ್ಲ. ಕೃತಿಗಳಿಗೆ ಹೆಚ್ಚು ಬೆಲೆ ನೀಡಲು ಸಾಧ್ಯವಿಲ್ಲದವರಿಗಾಗಿ ಶಿಲ್ಪದ ಗುಣಮಟ್ಟವನ್ನು ಕಡಿಮೆಗೊಳಿಸಲಿಲ್ಲ.

1956ರಿಂದಲೇ ಪರಮೇಶ್ವರಾಚಾರ್ಯರಿಗೆ ಪ್ರಶಸ್ತಿಗಳು ಪ್ರಶಸ್ತಿಗಳಿಗೆ
ಆಚಾರ್ಯರು ಪರಸ್ಪರ ಪರಿಚಯವಾದುವು. ಅಂದಿನಿಂದ ಇವೆರಡರ ನಂಟು
ಅಂಟುಬಿಡದಂತೆ ಒಗ್ಗೂಡಿದೆ. 1956ರಲ್ಲಿ ಆಚಾರ್ಯರು ವಾರಣಾಸಿಯ
ಆನಂದ ಮಯಿ ಮಾತಾಜಿ ಅವರು ಆಚಾರ್ಯರನ್ನು ವಾರಣಾಸಿಗೆ ಕರೆಸಿ
ಅಲ್ಲಿಯೇ ವಿಶ್ವಾಸದಿಂದ ಸನ್ಮಾನ ಮಾಡಿದರು. 1956ರಲ್ಲಿ ಮೈಸೂರಿನ
ಹಳೆಯ ಅಗ್ರಹಾರದ ತ್ಯಾಗರಾಜ ರಸ್ತೆಯಲ್ಲಿ ಪ್ರಸನ್ನ ಸಾಯಿಬಾಬ



ಎಸ್. ರಾಧಾಕೃಷ್ಣನ್ ಅವರಿಂದ ಸನ್ಮಾನ

ಮಂದಿರದ ರಚನೆಯಾಗಿ ಕುಳಿತ ಭಂಗಿಯಲ್ಲಿರುವ ನೈಜಶೈಲಿಯ ಸಾಯಿಬಾಬರ ಮೂರ್ತಿಯನ್ನು ಆಚಾರ್ಯರು ರೂಪಿಸಿಕೊಟ್ಟಿದ್ದು, ಅಂದು ರಾಜಪ್ರಮುಖ ರಾಗಿದ್ದ ಜಯಚಾಮರಾಜ ಒಡೆಯರ್ ಅವರು ದೇಗುಲದ ಆರಂಭೋತ್ಸವ ವನ್ನು ಮಾಡಿ ಶಿಲ್ಪ ರಚನೆ ಮಾಡಿದ ಪರಮೇಶ್ವರಾಚಾರ್ಯರನ್ನೂ ಹಾಗೂ ಅವರ ಸಹೋದರ ಸದಾನಂದಾಚಾರ್ಯ ಅವರನ್ನು ಸನ್ಮಾನಿಸಿ ಗೌರವಿಸಿದರು. ಮಾರ್ಚಿ 16, 1957ರಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಮಂದಿರದವರು ಮೆಚ್ಚಿಗೆ ಸೂಚಿಸಿ ಪ್ರಶಸ್ತಿ ಪತ್ರವನ್ನು ನೀಡಿದರು.

"The Prasanna Sai Mandir (Regd.,) Mysore have the great pleasure to record the services of Messrs Sadanandachar and Parameshwarachar, sons of late Mirle Chowda Char in executing and completing the Sri Sai Baba image in Krishna shile to the satisfaction of all lovers of art and particularly the devotees of Sri Sai Baba. This image of exquisite workmenship is the result of their deep and prayerful devotion to Sri Sai Baba. They are fittingly rewarded for their noble services, by the ever lasting gratitude of the devotees of Sri Sai Baba.

May Sir Sai Baba bless them for grater prosperity and renown"

ಎಂದಿದ್ದು ಪರಮೇಶ್ವರಾಚಾರ್ಯರ ಮುಂದಿನ ಶ್ರೇಯೋಭಿವೃದ್ಧಿಗೆ ನಾಂದಿಯಾಯಿತು.

## ರಾಷ್ಟ್ರ ಪ್ರಶಸ್ತಿ

ನಾಡಿನ ಶಿಲ್ಪಿಗಳನ್ನು ಗುರುತಿಸಲು ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಇರಿಸಿದಾಗ ಪ್ರಥಮವಾಗಿ ಕರ್ನಾಟಕದಿಂದ ಆಯ್ಕೆಯಾದವರಲ್ಲಿ ಪರಮೇಶ್ವರಾಚಾರ್ಯರೂ ಒಬ್ಬರು. 1965ರಲ್ಲಿ ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಖ್ಯಾತ ತತ್ವಜ್ಞಾನಿ ಎಸ್. ರಾಧಾಕೃಷ್ಣನ್ ಅವರ ಅಮೃತ ಹಸ್ತದಿಂದ ಸ್ವೀಕರಿಸಿದ ಪ್ರಶಸ್ತಿ ಫಲಕದಲ್ಲಿ ಶಿಲ್ಪ ಹಾಗೂ ಶಿಲ್ಪ ಕಾರ್ಯಾಚರಣೆಗೆ ಸಂಬಂಧಿಸಿದಂತೆ ಹಲವಾರು

ಉಬ್ಬು ಶಿಲ್ಪಗಳಿದ್ದು ಇಡೀ ಫಲಕವೇ ಒಂದು ಕಲಾಕೃತಿಯಂತೆ ಕಂಗೊಳಿಸುತ್ತದೆ. ಈ ಒಂದು ಪ್ರಶಸ್ತಿಗೆ ಆಚಾರ್ಯರು ಭಾಜನರಾಗಿದ್ದು ಮೈಸೂರು ರಾಜ್ಯದ ಕರಕುಶಲ ಅಭಿವೃದ್ಧಿ ಮಂಡಳಿಗೂ, ಸಹ ಕಲಾವಿದರಿಗೂ ಅಪಾರ ಸಂತೋಷವಾಗಿ ಆಚಾರ್ಯರಿಗೆ ಸನ್ಮಾನವೊಂದನ್ನು ಮಾಡಿ ಬಿನ್ನವತ್ತಳೆಯನ್ನು ಅರ್ಪಿಸಿದರು. ಅದರಲ್ಲಿ 'ರಾಷ್ಟ್ರಾಧ್ಯಕ್ಷರು.... ತಮಗೆ ನೀಡಿದ ರಾಷ್ಟ್ರ ಸನ್ಮಾನ, ನಮಗೆ ಸಂತಸ ಭಾಗ್ಯ ಮತ್ತು ಹೆಮ್ಮೆ. ಶ್ರೀಮಾನ್ ಸಿ. ಪರಮೇಶ್ವರ ಆಚಾರ್ ಅವರೇ ತಾವು ಗಳಿಸಿದ ಈ ಸನ್ಮಾನದ ನೆನಪಿಗಾಗಿ, ಮೈಸೂರು ರಾಜ್ಯದ ಕರಕುಶಲ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರ ಮತ್ತು ಸದಸ್ಯರ ಮೆಚ್ಚಿಗೆಯ ಮುಡಿಪಾಗಿ, ತಮ್ಮ ಸಂಪ್ರದಾಯ ಶುದ್ಧ ಕಲಾತ್ಮಕತೆಯ ಮೆಚ್ಚಿಗೆಯ ಕುರುಹಾಗಿ ನಮ್ಮ ಕಾಣಿಕೆ - ಈ ಸನ್ಮಾನ ಪತ್ರ'' ಎಂದು 1966ರ ಫೆಬ್ರವರಿ 25ರಂದು ನೀಡಿ ಪುರಸ್ಕರಿಸಿದರು.



ಎಸ್. ನಿಜಲಿಂಗಪ್ಪ ಅವರಿಂದ ಸನ್ಮಾನ

ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮದ ಅಧ್ಯಕ್ಷಿಣೆ ಶ್ರೀಮತಿ ಪಿ. ಎಂ. ರೆಡ್ಡಿಯವರ ಸಮ್ಮುಖದಲ್ಲಿ 1966ರಲ್ಲಿ ಪರಮೇಶ್ವರಾಚಾರ್ಯರಿಗೆ ರಾಜ್ಯ ಪ್ರಶಸ್ತಿ ಕೊಡಲಾಗಿತ್ತು. ಅಂದಿನ ಮುಖ್ಯಮಂತ್ರಿಯಾಗಿದ್ದ ಎಸ್. ನಿಜಲಿಂಗಪ್ಪ ಅವರಿಂದ ಪ್ರಶಸ್ತಿ ಸ್ವೀಕರಿಸಿದ್ದು ಇವರೊಂದಿಗೆ, ಡಿ. ವಾದಿರಾಜ್, ಅಪ್ಪುಕುಟ್ಟಿ ಆಚಾರಿ, ಭಾಷ್ಯಂ ಸ್ಥಪತಿ ಹಾಗೂ ಮಿರ್ ಶೌಕತ್ ಅಲಿ, ಪದ್ಮನಾಭಯ್ಯ ಅವರುಗಳನ್ನೂ ಸನ್ಮಾನಿಸಲಾಯಿತು.

ಪ್ರೌಢ ಶಾಲೆಯೊಂದು ಇವರನ್ನು ಸನ್ಮಾನಿಸಿದ ಅಪರೂಪದ ಪ್ರಸಂಗವೊಂದು 1967ರಲ್ಲಿ ನಡೆಯಿತು. ಗಾಂಧೀನಗರ ಪ್ರೌಢ ಶಾಲೆಯವರು, ಶಾಲೆಯ ಪ್ರಾಂಗಣದಲ್ಲಿ ಇರಿಸಲು ನೆಹರು ಅವರ ಎದೆಮಟ್ಟದ ಶಿಲ್ಪವನ್ನು ಪರಮೇಶ್ವರಾಚಾರ್ಯರಿಂದ ಮಾಡಿಸಿದ್ದು 15ನೇ ಜನವರಿ 1967ರಂದು ಅಂದಿನ ರಾಜ್ಯಪಾಲ ವಿ.ವಿ.ಗಿರಿ ಅವರಿಂದ, ಪ್ರತಿಮೆಯ ಅನಾವರಣ ಮಾಡಿಸಿ, ಮುಖ್ಯೋಪಾಧ್ಯಾಯರಾಗಿದ್ದ ಎಂ.ಪಿ.ಎಲ್. ಶಾಸ್ತ್ರಿ ಅವರ ಸಮ್ಮುಖದಲ್ಲಿ, ಗಿರಿ ಅವರಿಂದ ಆಚಾರ್ಯರಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು. ಅಖಿಲ ಭಾರತ ಕಲೆ ಮತ್ತು ಕರಕುಶಲ ಕಲೆ ಸೊಸೈಟಿ, ನವದೆಹಲಿಯವರು 1988ರಲ್ಲಿ ಅಖಿಲಭಾರತ ಕಲಾವಿದರ ವಜ್ರ ಮಹೋತ್ಸವ ಕಾರ್ಯಕ್ರಮದಲ್ಲಿ ಪರಮೇಶ್ವರಾಚಾರ್ಯರನ್ನೂ ಸನ್ಮಾನಿಸಿದರು.

### ಮಠ ಮಾನ್ಯಗಳಿಂದ

ದಕ್ಷಿಣ ಕರಾವಳಿಯಲ್ಲಿ, ನಿಂತ ಭಂಗಿಯಲ್ಲಿರುವ ದ್ವಿಬಾಹು ಗಣಪತಿಗಳು ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತದೆ. ಗೋಕರ್ಣ, ಇಡುಗುಂಜಿ ಇತ್ಯಾದಿ ಪ್ರಸಿದ್ಧ ಕ್ಷೇತ್ರಗಳನ್ನು ಉದಾಹರಿಸಬಹುದು. ಈ ಬಗೆಯ ಗಣಪತಿಗಳ ರಚನೆ ಕದಂಬರ ಕಾಲದ ಇಲ್ಲವೆ ಇನ್ನೂ ಪೂರ್ವದ ರಚನೆ ಎಂದು ಭಾವಿಸಲಾಗಿದೆ. ಮುದ್ದಾದ ಬಾಲಕನಂತೆ ರೂಪಿಸಿರುವ ಇದೇ ಬಗೆಯ ಶಿಲ್ಪಕ್ಕೆ ಸಿದ್ಧಗಂಗೆಯ ಶ್ರೀ ಮಠದಿಂದ ವಿಜ್ಞಾಪನೆ ಬಂದದ್ದು ಪರಮೇಶ್ವರಾಚಾರ್ಯರು ಭಕ್ತಿ ಭಾವದಿಂದ ಶಿಲ್ಪವನ್ನು ಪೂರೈಸಿಕೊಟ್ಟರು. ಜೂನ್ 3, 1973 ರಂದು ವಿಗ್ರಹ

ಪ್ರತಿಷ್ಠಾಪನೆಯಾಗಿದ್ದು ವಿಗ್ರಹ ಹಾಗೂ ಇಡೀ ದೇವಾಲಯಗಳ ರಚನೆಗೆ ಕಾರಣಕರ್ತರಾದ ವಾಣಿಜ್ಯೋದ್ಯಮಿ ಟಿ. ಎಸ್. ಶಂಕರಪ್ಪ ಅವರು ಹಲವಾರು ವರ್ಷಗಳ ಹಿಂದೆ ತಾವು ಗೋಕರ್ಣ ಕ್ಷೇತ್ರದಲ್ಲಿ ಕಂಡಿದ್ದ ಗಣಪತಿಯ ಪ್ರತಿರೂಪ ಮಾಡಿಸಬೇಕೆಂದಿದ್ದು ಇಂದು ಆ ಕಾರ್ಯ ನೆರವೇರಿತೆಂದು ಸಂತೋಷಿಸಿದರು. ಅದೇ ವೇಳೆಗೆ ಶಂಕರಪ್ಪ ಸನ್ಮಾನ ಸಮಿತಿಯವರು, ಶ್ರೀ ಮಠದ ಶ್ರೀ ಶಿವಕುಮಾರ ಸ್ವಾಮಿಗಳ ಸನ್ನಿಧಿಯಲ್ಲಿ ಪರಮೇಶ್ವರಾಚಾರ್ಯರನ್ನು ಸನ್ಮಾನಿಸಿ 'ಮಾನಪತ್ರ' ನೀಡಿದರು. ಅದರಲ್ಲಿ "(ಭಾರತ ಧಾರ್ಮಿಕ) ಪರಂಪರೆಗೆ ಚ್ಯುತಿ ಬರದಂತೆ ಇಂದು ತಾವು ಜಗದ್ವಿಖ್ಯಾತ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ದ್ವಿಭುಜ ಗಣಪತಿಯನ್ನು ಪ್ರತಿಷ್ಠಾಪಿಸಿರುವುದು ನಮ್ಮೆಲ್ಲರಿಗೂ ಆನಂದದ ವಿಷಯ ಅಲ್ಲದೆ ತಾವು ಇಂದು ಪ್ರತಿಷ್ಠಾಪಿಸಿರುವ ದ್ವಿಭುಜ ಗಣಪತಿಯನ್ನು ಅತ್ಯಂತ ಸುಂದರವಾಗಿ ಕರ್ನಾಟಕ ಶಿಲ್ಪಕಲೆ ಗನುಗುಣವಾಗಿ ಕಡೆದಿರುವ, ಮಹಿಮಾನ್ವಿತ ದಿ॥ ಶಿಲ್ಪ ಸಿದ್ಧಾಂತಿ ಸಿದ್ಧಲಿಂಗ ಸ್ವಾಮಿ ಅವರ ನೆಚ್ಚಿನ ಶಿಷ್ಯರಾದ, ರಾಷ್ಟ್ರಪ್ರಶಸ್ತಿ ವಿಜೇತ ಶ್ರೀ ಸಿ. ಪರಮೇಶ್ವರಾಚಾರ್ಯರವರಿಗೂ ಶ್ರೀ ಸನ್ನಿಧಿಯವರ ಆಶೀರ್ವಾದ ಮತ್ತು ಶ್ರೀ ಗಣಪತಿ ಯವರ ಅನುಗ್ರಹವುಂಟಾಗಲೆಂದು ಬಯಸುತ್ತೇವೆ" ಎಂದು ಬರೆಯಿಸಿದ್ದರು.

ಈ ರೀತಿಯ ಸಾರ್ವಜನಿಕ ಸನ್ಮಾನಗಳು ಆಚಾರ್ಯರಿಗೆ ರಾಜ್ಯದಾದ್ಯಂತ ನಡೆದಿವೆ. ದಾಖಲೆಯಿರುವ ನಾಲ್ಕೈದು ಸಂಗತಿಗಳಷ್ಟೇ ಇಲ್ಲಿ ಹೇಳಲು ಸಾಧ್ಯವಾಗಿದ್ದು ಉಳಿದವು ಸ್ವತಃ ಆಚಾರ್ಯರ ನೆನಪಿನಲ್ಲೂ ಇಲ್ಲ.

### ಅಭಿನವ ಜಕಣ

ಉಳಿದಂತೆ ರಾಜ್ಯದ ಕಲೆಯ ಸಿರಿವಂತಿಕೆಯನ್ನು ದೇಶವಿದೇಶಗಳಲ್ಲಿ ಬೆಳಗಿದ್ದಕ್ಕೆ ಕರ್ನಾಟಕ ಲಲಿತಕಲೆಯ ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೂಲ್ಯ ಸೇವೆಗಾಗಿ ಕರ್ನಾಟಕ ಲಲಿತಕಲಾ ಅಕಾಡಮಿ 1990ರ ಗೌರವ ಪ್ರಶಸ್ತಿಯನ್ನು ಪರಮೇಶ್ವರಾಚಾರ್ಯರಿಗೆ 20.1.93ರಂದು ನೀಡಿತು. ಆಚಾರ್ಯರು ಶಿಲ್ಪಕಲಾ ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ

ಕರ್ನಾಟಕ ಸರ್ಕಾರದ 1994ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯನ್ನು 1ನೇ ನವೆಂಬರ್ 1994 ರಂದು ಮುಖ್ಯಮಂತ್ರಿ ವೀರಪ್ಪ ಮೊಯ್ಲಿ ಅವರು ನೀಡಿ ಗೌರವಿಸಿದರು.

ಪರಮೇಶ್ವರಾಚಾರ್ಯರಿಗೆ ದೊರೆತ ಪ್ರಶಸ್ತಿಗಳಿಗೆ ಚಿನ್ನದಗರಿ ಸಿಕ್ಕಿಸಿದಂತಹ ಪ್ರಶಸ್ತಿ ಎಂದರೆ 'ಅಮರಶಿಲ್ಪಿ ಜಕಣಾಚಾರ್ಯ ಪ್ರಶಸ್ತಿ'. 1995ರಲ್ಲಿ ಶಾಮಾರಾಯಾಚಾರ್ಯರ ಅಧ್ಯಕ್ಷತೆಯಲ್ಲಿ ಶಿಲ್ಪಕಲಾ ಅಕಾಡಮಿ ರಚನೆಯಾದಾಗಲೇ ಶಿಲ್ಪಕಲೆಯ ಕ್ಷೇತ್ರಕ್ಕೆ ಒಂದು ಲಕ್ಷರೂ ಮೊತ್ತದ 'ಜಕಣಾಚಾರ್ಯ ಪ್ರಶಸ್ತಿ' ಕೊಡಮಾಡುವ ಬಗ್ಗೆಯೂ ಪ್ರಕಟಿಸಲಾಯಿತು. ಅಂತೆಯೇ ಪ್ರಪ್ರಥಮವಾಗಿ 1995ರ ಜಕಣಾಚಾರ್ಯ ಪ್ರಶಸ್ತಿಗೆ ಪರಮೇಶ್ವರಾಚಾರ್ಯರನ್ನೇ ಆಯ್ಕೆ ಮಾಡಲಾಯಿತು. "ಈ ಹಿರಿಯ ಕಲಾವಿದರು ಶಿಲ್ಪಕಲೆಗೆ




ಜಕಣಾಚಾರ್ಯ ಪ್ರಶಸ್ತಿ

ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕನ್ನಡ ನಾಡಿನ ಶಿಲ್ಪಕಲೆಯ ತವರೂರಾಗಿರುವ ಬೇಲೂರು ಹಳೆಯಬೀಡಿನ ಶಿಲ್ಪಕಲೆಯ ಸೃಷ್ಟಿಕರ್ತ ಅಮರ ಶಿಲ್ಪಿ ಎಂದು ಪ್ರಸಿದ್ಧಿ ಪಡೆದ ಜಕಣಾಚಾರಿ ಅವರ ಹೆಸರಿನಲ್ಲಿ ಕರ್ನಾಟಕ ಸರ್ಕಾರವು ಪ್ರತಿಷ್ಠಿತ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ'' ಎಂಬ ಆಶಯದೊಂದಿಗೆ 28ನೇ ಜೂನ್ 1996ರಂದು ಆಚಾರ್ಯರು ಸಚಿವೆ ಲೀಲಾದೇವಿ ಪ್ರಸಾದ್ ಅವರಿಂದ ಪ್ರಶಸ್ತಿಯನ್ನು ಪಡೆದರು.

ಇವಲ್ಲದೆ ಪರಮೇಶ್ವರಾಚಾರ್ಯರಿಗೆ ಅಖಿಲಭಾರತ ಕಲೆ ಹಾಗೂ ಕರಕುಶಲ ಕಲಾ ಸೊಸೈಟಿಯವರ ರಜತವರ್ಷ ಪ್ರಶಸ್ತಿದೊರೆತಿದೆ. ರೇಣುಕಾಚಾರ್ಯ ಕಾಲೇಜಿಗೆ ಗಾಂಧಿ ಶಿಲ್ಪ ರಚಿಸಿದಾಗ, ಬಿ. ಡಿ. ಜತ್ತಿ ಅವರಿಂದ, ಅಂಬೇಡ್ಕರ್ ಮೆಡಿಕಲ್ ಕಾಲೇಜಿಗೆ ಅಂಬೇಡ್ಕರ್ ವಿಗ್ರಹ ನೀಡಿದಾಗ ರಾಮವಿಲಾಸ್ ಪಾಸ್ವಾನ್ ಅವರಿಂದ ಗೌರವಿಸಲಾಯಿತು. ಆಚಾರ್ಯರಿಗೆ 1998ರ ಮೈಸೂರಿನ ರಾಮ್‌ಸನ್ ಸಂಸ್ಥೆಯ 'ಕಲಾಸನ್ಮಾನ್' ಪ್ರಶಸ್ತಿಯು ದೊರೆತ್ತಿದ್ದು. ಶ್ರೀಕಂಠದತ್ತನರಸಿಂಹರಾಜ ಒಡೆಯರ್ ಅವರಿಂದ ಮಾರ್ಚಿ 1998ರಲ್ಲಿ ಸನ್ಮಾನಿಸಲಾಯಿತು.

**ಕಲಾ ಕೃತಿಗಳು**

ಪರಮೇಶ್ವರಾಚಾರ್ಯರು ಈವರೆಗೆ ಎಷ್ಟು ಕೃತಿಗಳನ್ನು ಮಾಡಿರುವರೆಂಬುದಾಗಲೀ, ಎಲ್ಲಿವೆ ಎಂಬುದಾಗಲೀ ಖಚಿತವಾಗಿ ತಿಳಿದು ಬರುವುದಿಲ್ಲ. ಈ ಬಗೆಯ ದಾಖಲೆಗಳನ್ನು ಅವರು ಇರಿಸಿಯೂ ಇಲ್ಲ. ಹೆಚ್ಚಿನವು ಬೇಡಿಕೆಗಾಗಿ ರಚಿಸಿದ್ದು ಕೃತಿ ನಿರ್ಮಾಣದ ನಂತರ ಕೆಲವೊಮ್ಮೆ ಅವುಗಳ ಛಾಯಾಚಿತ್ರ ಇರಿಸಿಕೊಳ್ಳಲೂ ವ್ಯವಧಾನವಿರುವುದಿಲ್ಲ. ಅಲ್ಲದೆ ಆಚಾರ್ಯರು ಕಳೆದ ಐವತ್ತೈದು ವರ್ಷಗಳಿಂದಲೂ ಕ್ರಿಯಾತ್ಮಕವಾಗಿ ಕೃತಿ ರಚನೆ ಮಾಡುತ್ತಿದ್ದು ಈ ಹಿಂದೆಲ್ಲ ಯಾವುದೇ ಬಗೆಯ ದಾಖಲೆಯನ್ನು ಇರಿಸಿಕೊಳ್ಳಲೂ ಸಾಧ್ಯವಿರಲಿಲ್ಲ.

ಅರಮನೆಯ ಭುವನೇಶ್ವರಿ ಹಾಗೂ ರಾಮಾನುಜ ರಸ್ತೆಯ ಕಾಮಕಾಮೇಶ್ವರಿ ದೇವಾಲಯಗಳ ರಚನೆಯಲ್ಲಿ ಪರಮೇಶ್ವರಾಚಾರ್ಯರದೂ ಮುಖ್ಯ ಪಾತ್ರವಿರುವುದಾದರೂ ಅದೊಂದು ಸಾಮೂಹಿಕ ರಚನೆ. ಯಾರ ಪಾಲು ಎಷ್ಟು, ಯಾವುದು ಎಂದು ತಿಳಿಯಲಾಗದು. ಎಲ್ಲಕ್ಕಿಂತ ಅಂತಿಮ ರೂಪ ನೀಡುತ್ತಿದ್ದವರು ಶ್ರೀ ಸಿದ್ಧಲಿಂಗ ಸ್ವಾಮಿಯವರು. ವಾಸ್ತುವಿನ ರಚನೆಯಲ್ಲಿ ಹಲವರ ನೆರವು ಇದ್ದೇ ಇರುತ್ತದೆ.

ಅವುಗಳ ರೂಪವಿನ್ಯಾಸ, ಅಂತಿಮ ರೂಪ ಇತ್ಯಾದಿಗಳು ಒಬ್ಬ ಮುಖ್ಯ ಸ್ಥಪತಿಯದಾಗಿರಬಹುದು. ಕೆಲವೊಮ್ಮೆ ಸಹಾಯಕರ ನೆರವು ತೀರಾ ಗೌಣವೂ ಆಗಿರಬಹುದು. ಈ ದೃಷ್ಟಿಯಿಂದ ಆಚಾರ್ಯರದೇ ಸ್ವಂತ ಕೃತಿಗಳನ್ನು ಮೈಸೂರಿನ ಸಾಯಿಬಾಬ ಬಿಂಬದಿಂದ ಆರಂಭಿಸಬಹುದು. ಕುಳಿತ ಭಂಗಿಯಲ್ಲಿ ಕೃಷ್ಣಶಿಲೆಯಲ್ಲಿ ಕಡೆದಿರುವ ಶಿರಡಿಯ ಸಾಯಿಬಾಬ ಮೂರ್ತಿ, ಭಾವುಕರಿಗೆ ಭಕ್ತಿ ಭಾವ ಮೂಡಿಸಲು ಯಶಸ್ವಿಯಾಗಿದೆ. ಪರಮೇಶ್ವರಾಚಾರ್ಯರ ತಂಗಿಗೆ ಬಂದಿದ್ದ ಖಾಯಿಲೆಯೊಂದು ಸಾಯಿಬಾಬರ ಸೇವೆಯಿಂದ ಗುಣವಾಗಿದ್ದಕ್ಕೆ ತಾಯಿಯ ಇಚ್ಛೆಯಂತೆ ಆಚಾರ್ಯರು ಅವರ ಸಹೋದರರು ಶಿಲ್ಪನ್ನು ಉಚಿತವಾಗಿ ಕಡೆದುಕೊಟ್ಟರು. ಸಹೋದರಿ ಕಲ್ಲಿನ ವೆಚ್ಚ ನೀಡಿದರು.

ವಾರಣಾಸಿಯ ಆನಂದಮಯಿ ಆಶ್ರಮಕ್ಕೆ ಗಂಧದ ಮರದಲ್ಲಿ ದೊಡ್ಡ ಆಕಾರದ ಮಂಟಪದ ರಚನೆ ಇನ್ನೊಂದು ಮೈಲಿಗಲ್ಲು, ಅಂತೆಯೆ ಮುಂಬಯಿಯ ಗೋದಾವರಿ ಸಕ್ಕರೆ ಕಾರ್ಖಾನೆಗೆ ರಚಿಸಿದ ಮಂಟಪ, ಅಲ್ಲಿಗೆ ಕಳಿಸುವ ಮೊದಲು ಕೆಲಕಾಲ ಮಹಾತ್ಮಗಾಂಧಿ ರಸ್ತೆಯಲ್ಲಿರುವ ಕರಕುಶಲ ವಸ್ತು ಮಾರಾಟ ಸಂಸ್ಥೆ 'ಕಾವೇರಿ'ಯಲ್ಲಿ ಸಾರ್ವಜನಿಕರಿಗೆ ಪ್ರದರ್ಶಿಸಿದ್ದು ಅದು ಕಟ್ಟಡದ ಒಂದು ಭಾಗವೋ ಎಂಬಂತೆ ಬೃಹದಾಕಾರದಲ್ಲಿತ್ತು. ಸುಮಾರು 10 ಅಡಿ ಅಗಲ, $9^1/_2$ ಅಡಿ ಎತ್ತರವಿದ್ದ ಎಡ ಭಾಗಕ್ಕೆ ರಾಮಾಯಣ, ಬಲಭಾಗಕ್ಕೆ ಮಹಾಭಾರತದ ದೃಶ್ಯಗಳು ಮಧ್ಯಭಾಗದಲ್ಲಿ ಕೃಷ್ಣಲೀಲೆ, ಚೌಕಟ್ಟಿನಲ್ಲಿ ದಶಾವತಾರಗಳು, ಗಂಧರ್ವರು, ಪೀಠದ ಕೆಳಗೆ

ಸೂರದಾಸ್, ಮೀರ, ಗಾಂಧಿ, ಹರಿದಾಸ, ಚೈತನ್ಯ ಪ್ರಭುಗಳು ಇತ್ಯಾದಿಯಾಗಿ ಸುಮಾರು 80 ಮೂರ್ತಿಗಳಿಂದ ಒಳಗೊಂಡು ಜನಾಕರ್ಷಣೀಯುವಾಗಿತ್ತು. ವಿಗ್ರಹಗಳು ಗಂಧದ ಮರದಲ್ಲೂ ಉಳಿದ ಭಾಗ ತೇಗದ ಮರದಲ್ಲೂ ರಚಿತವಾಗಿತ್ತು. ಮುಂಭಾಗದ ಕಂಬಗಳು ತಲಾ ಎಂಟು ಸೀಳು ಗಳಿಂದ ಕೂಡಿದ್ದು ಪ್ರತಿಯೊಂದು ಸೀಳು ಒಂದೊಂದು ಸಿಂಹವನ್ನು ಆಧರಿಸಿದ್ದವು. 1975ರಲ್ಲಿ ರಚಿಸಿದ ಈ ಕೃತಿಗಾಗಿ ನಲವತ್ತ ಎಂಟು ವಯಸ್ಸಿನ ಆಚಾರ್ಯರು ಇಬ್ಬರು ಹುಡುಗರ ಸಹಾಯ ದೊಂದಿಗೆ ದಿನಕ್ಕೆ 2-3 ಗಂಟೆ ಗಳಂತೆ ವ್ಯಯಿಸಿ ಒಂದು ವರ್ಷ ಕಾಲಾವಧಿಯನ್ನು ತೆಗೆದು ಕೊಂಡರು. ಅಂದಿಗೇ ಈ ಕೃತಿಗೆ ಅರ್ಧ ಲಕ್ಷ ರೂಗಳ ವೆಚ್ಚ ವಾಗಿತ್ತು.



ಹೊಯ್ಸಳ ಶೈಲಿಯ ಶಿಲ್ಪ

ಬೆಂಗಳೂರು ಆಕಾಶವಾಣಿಗೆ ಉತ್ತರ ಭಾರತದವರೊಬ್ಬರು ಅಧಿಕಾರಿಯಾಗಿ ಬಂದಿದ್ದು ರಾಜ ಭವನದಲ್ಲಿ ಕೃತಿಯೊಂದನ್ನು ಕಂಡು ದೆಹಲಿಯ ಕೇಂದ್ರ ಆಕಾಶವಾಣಿ ನಿಲಯದಲ್ಲಿ ಅದೇಬಗೆಯ ಶಿಲ್ಪಕೃತಿ ಇರಿಸಲು ಆಚಾರ್ಯರಿಗೆ ಬೇಡಿಕೆ ಸಲ್ಲಿಸಿದರು. ಅದರಂತೆ ಬೇಲೂರು ಶಿಲಾಬಾಲಿಕೆಯರಲ್ಲಿ ಮೃದಂಗ ವಾದಿನಿ, ವೀಣಾ ವಾದಂತಿಯರ ಶಿಲ್ಪವನ್ನು

ಕಾಷ್ಠದಲ್ಲಿ ಎರಡೂವರೆ ಅಡಿ ಎತ್ತರದಲ್ಲಿ ಬಿಡಿ ಬಿಡಿಯಾಗಿ ರಚಿಸಿಕೊಟ್ಟರು. ನೈಜ ಹೊಯ್ಸಳ ಶಿಲ್ಪಕ್ಕಿಂತ ಇವು ಸುಂದರವಾಗಿದೆ ಎಂದರೆ ತಪ್ಪಿಲ್ಲ. ಕಾರಣ ಇವು ಕಟ್ಟಿಗೆಯವು ಆಕಾರಗಳ ದುಂಡುತನ, ನಯಗಾರಿಕೆ, ಸೂಕ್ಷ್ಮ ಕೆತ್ತನೆ ಇಲ್ಲಿ ಹೆಚ್ಚು ಸಾಧ್ಯವಾಗಿದೆ. ಆಚಾರ್ಯರು ಹೊಯ್ಸಳಾದಿ ಎಲ್ಲ ಶೈಲಿಗಳ ಅಂತರಾತ್ಮವನ್ನೂ ಆಳವಾಗಿ ಅಭ್ಯಸಿಸಿದ್ದು ಅಲ್ಲಿಯ ಕುಂದು ಕೊರತೆಯನ್ನು ಇಲ್ಲಿ ನೀಗಿದ್ದಾರೆ. ಚಾಮರಾಜೇಂದ್ರ ಶಾಲೆಯಿಂದ ಬೇಲೂರು ಹಳೆಬೀಡಿಗೆ ಪ್ರವಾಸ ಹೋದಾಗ ಶಿಲ್ಪಗಳ ವೀಕ್ಷಣೆಯಿಂದ ಶಿಲಾಶಿಲ್ಪಿ ಆಗಬೇಕೆಂಬ ಹಂಬಲ ಹೆಚ್ಚಾಯಿತು ಎಂದು ಅವರೇ ಒಂದು ಕಡೆ ಹೇಳಿಕೊಂಡಿದ್ದಾರೆ.

## ಮಾಧ್ಯಮ ವೈವಿಧ್ಯ

ಶಿಲೆ, ಮರ, ಲೋಹ ಯಾವುದೇ ಮಾಧ್ಯಮವಾಗಲೀ ಆಚಾರ್ಯರ ಕೃತಿಗಳಲ್ಲಿ ಮುಖ್ಯವಾಗಿ ಕಂಡುಬರುವುದು ಶೈಲಿಯ ಶುದ್ಧತೆ ಹಾಗೂ ತಾಳಮಾನ. ಇದೇ ಸಾಂಪ್ರದಾಯಿಕ ಮನೆತನದಿಂದ ಬಂದ ಶಿಲ್ಪಿಗೂ ಹಾಗಲ್ಲದೆ ಸ್ವಂತ ಕಲಿತ ಬೇರೆ ಮನೆತನದ ಶಿಲ್ಪಿಗೂ ಇರುವ ವ್ಯತ್ಯಾಸ. ಸಾಂಪ್ರದಾಯಿಕ ಶಿಲ್ಪಿಗೆ ತಾಳಮಾನ ಹಾಗೂ ಶೈಲಿಯ ಪರಿಚಯ, ಧ್ಯಾನಶ್ಲೋಕಗಳು ಇದ್ದರೆ ಸಾಕು. ಬೇಡಿಕೆಗೆ ಅನುಗುಣವಾಗಿ ಯಾವುದೇ ನಿಲವು, ಭಾವ ಭಂಗಿಯ ಶಿಲ್ಪ ಮಾಡಬಲ್ಲ. ಹಾಗಿಲ್ಲದಾತನಿಗೆ ಮೂಲಕೃತಿಯೊಂದರ ಅಗತ್ಯವಿದ್ದು ಅದನ್ನು ಅನುಸರಿಸಿ ನಕಲು ಮಾಡುವುದಕ್ಕಿಂತ ಹೆಚ್ಚಿನದು ಸಾಧ್ಯವಾಗುವುದಿಲ್ಲ.

ಎಲ್ಲರಂತೆ ಪರಮೇಶ್ವರಾಚಾರ್ಯರೂ ಅರ್ಧನಾರೀಶ್ವರ ಶಿಲ್ಪದ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಭಾರತೀಯ ಶಿಲ್ಪಗಳಲ್ಲಿ ಸ್ತ್ರೀ-ಪುರುಷ ಆಕಾರಗಳಲ್ಲಿ ಇರುವ ಭಿನ್ನತೆ ಕಡಿಮೆ. ಮುಖ್ಯವಾಗಿ ಸ್ತನ ಭಾಗ, ಭುಜ ಹಾಗೂ ಕಟಿಪ್ರದೇಶಗಳಲ್ಲಿ ನಿಮ್ನೋನ್ನತವಿದ್ದು ಶಾಸ್ತ್ರಗ್ರಂಥಗಳ ತಾಳಮಾನವೂ ಅಷ್ಟನ್ನು ಮಾತ್ರ ವಿವರಿಸುತ್ತದೆ. ಒಂದೇ ಶಿಲ್ಪದಲ್ಲಿ ಹೆಣ್ಣು ಗಂಡುಗಳೆರಡನ್ನೂ

ತಂದಾಗ ಅಲ್ಪ ವ್ಯತ್ಯಾಸವೇ ಅಹಿತಕಾರಿಯಾಗಿ ತೋರುತ್ತದೆ. ಅದರಲ್ಲೂ ಒಂದೆಡೆ ವಿಶೇಷವಾಗಿ ರಚಿಸಿದ ಉನ್ನತ ಸ್ತನ ಹಾಗೂ ಇನ್ನೊಂದೆಡೆ ಗಂಡೆದೆ ನೋಡಲು ಅನಾಕರ್ಶಕವಾಗಿರುತ್ತದೆ. ಗ್ರಾಹಕರ ಬೇಡಿಕೆ ಇದೇ ರೀತಿ ಇದ್ದಲ್ಲಿ ಏನೂ ಮಾಡಲೂ ಸಾಧ್ಯವಿಲ್ಲ. ಗ್ರಾಹಕ ಸ್ವಾತಂತ್ರ ನೀಡಿದರೆ ಶಿಲ್ಪಿಯ ಬುದ್ಧಿ ಶಕ್ತಿಗೆ ಸವಾಲಾಗುತ್ತದೆ. ಅಂತೆಯೇ ಆಚಾರ್ಯರು ಅರ್ಧನಾರೀಶ್ವರ ಶಿಲ್ಪವೊಂದನ್ನು ತ್ರಿಭಂಗಿಯಲ್ಲಿ ರೂಪಿಸಿದ್ದು. ಶಿವನ ಭಾಗದ ಭುಜಗಳು ಸಂಕುಚಿತಗೊಂಡು ಎದೆಯ ಭಾಗ ಸ್ವಲ್ಪ ಉಬ್ಬಿದಂತೆ ರಚನೆಯಾಗಿ ಅಹಿತಕಾರಿ ಪರಿಣಾಮವನ್ನು ನಿವಾರಿಸುತ್ತದೆ.

## ಶೈಲಿಯ ಶುದ್ಧತೆ

ಶೈಲಿಯ ಶುದ್ಧತೆಯ ಬಗ್ಗೆ ಆಚಾರ್ಯರು ಬಹಳಷ್ಟು ಕಡೆಗಳಲ್ಲಿ ಹೇಳಿಕೊಂಡಿದ್ದಾರೆ. ನಿಮಗೆ ಯಾವ ಶೈಲಿ ಇಷ್ಟ ಎಂದು ಕೇಳಿದಾಗ ಎಲ್ಲ ಶೈಲಿಯು ಇಷ್ಟ ಎಂದಿದ್ದಾರೆ. ಆದರೆ ಅದು ಶುದ್ಧವಾಗಿ ಒಂದು ಶೈಲಿಗೆ ಸೇರಿದಂತಿರಬೇಕೆಂಬುದು ಅವರ ಅಭಿಪ್ರಾಯ. ನಲವತ್ತು ವರ್ಷಗಳ ಹಿಂದೆ ಮೈಸೂರಿನಲ್ಲಿ ಒಂದೇ ಶಿಲ್ಪದಲ್ಲಿ ಹಲವಾರು ಶೈಲಿಗಳು ಮಿಶ್ರಗೊಂಡು ಕಲಬೆರಿಕೆ ಆಗಿತ್ತೆಂದೂ ಅದನ್ನು ಬಿಡಿಸಿ ಶುದ್ಧರೂಪಕ್ಕೆ ತರಲು ತಾವು ಪ್ರಯತ್ನಿಸಿದ್ದಾಗಿಯೂ ತಿಳಿಸುತ್ತಾರೆ. ಮೈಸೂರು ಅರಮನೆ ಹಲವಾರು ಶೈಲಿಗಳಿಂದ ರಚಿತವಾಗಿರುವುದು ಹಾಗೂ ಅದನ್ನು ಅನುಸರಿಸಿ ಬೆಂಗಳೂರಿನ ವಿಧಾನಸೌಧದಲ್ಲೂ ಆಧುನಿಕತೆ, ರೋಮ್ ಇತ್ಯಾದಿ ಶೈಲಿಯೂ ಸೇರಿರುವುದು ಕಾಣಬಹುದು. ವಾಸ್ತುಶಿಲ್ಪದ ಕಾರಣದಿಂದಾಗಿ ಇವನ್ನು ಸ್ವಾಗತಿಸಬಹುದು. ಆದರೆ ಬಿಡಿ ಶಿಲ್ಪಗಳು ಯಾವುದಾದರೊಂದು ಶೈಲಿಯಲ್ಲಿ ಇದ್ದಲ್ಲಿ ಹಿತಕಾರಿಯಾಗಿ ಕಾಣುತ್ತದೆ. ಶ್ರವಣಬೆಳಗೊಳದ ಚಂದ್ರಗುಪ್ತ ಬಸದಿಯಲ್ಲಿ ಪಾರ್ಶ್ವನಾಥನಿಗೆ ಸಂಬಂಧಿಸಿದ ಶಿಲ್ಪಗಳ ಪಟ್ಟಿಕೆಗಳಿದ್ದು ಆತನ ಜನನಕ್ಕೆ ಸಂಬಂಧಿಸಿದ ಶಿಲ್ಪ ಸಂಯೋಜನೆಯನ್ನು ಉಬ್ಬು ಶಿಲ್ಪವಾಗಿ ಚೋಳ ಪಲ್ಲವ

ಶೈಲಿಯಲ್ಲಿ ಆಚಾರ್ಯರು ಪುನರ್ ರೂಪಿಸಿದ್ದಾರೆ. ಪ್ರಸ್ತುತ ಈ ಶಿಲ್ಪ ಅಮೆರಿಕೆಯಲ್ಲಿದೆ.



ಪಾರ್ಶ್ವನಾಥನ ಜನನಕ್ಕೆ ಮುನ್ನ

ಡಿಸೈನ್ ಸೆಂಟರಿಗಾಗಿ ಹಲವಾರು ಶಿಲ್ಪ ರಚಿಸಿದ್ದು ನಂದಿ ವಾಹನನಾಗಿ ಶಿವ, ಕುಬ್ಜಗಣಗಳ ಮೇಳವಾದ್ಯದೊಂದಿಗೆ ಮೆರವಣಿಗೆಯಲ್ಲಿ ಬರುತ್ತಿರುವ ಕಾಷ್ಠದ ಉಬ್ಬು ಶಿಲ್ಪ ಬಾದಾಮಿ ಚಾಳುಕ್ಯರ ಶೈಲಿಯಲ್ಲಿದೆ. ವಿನ್ಯಾಸ ಕೇಂದ್ರಕ್ಕೆ ನೀಡಿರುವ ಅಘೋರೇಶ್ವರನ ಶಿಲ್ಪ ಉಲ್ಲೇಖಾರ್ಹವಾದುದು. ಅಘೋರೇಶ್ವರನ ಧ್ಯಾನ ಶ್ಲೋಕಕ್ಕೆ ಅನುಗುಣವಾಗಿ, ನೆಟ್ಟಗೆ ನಿಂತಂತೆ ಚಂದನದ ಮರದಲ್ಲಿ ಸುಮಾರು ಮೂರು ಅಡಿ ಎತ್ತರವಾಗಿ, ಶಿಲ್ಪದ ಎಲ್ಲ ಬದಿಯನ್ನು ಪರಿಪೂರ್ಣವಾಗಿ ತೋರುವಂತೆ ರೂಪಿಸಿದೆ. ಅಘೋರನಿಗೆ ನಾಲ್ಕು ಶಿರಗಳಿದ್ದು ಒಂದು ಹಿಂಬದಿಯಲ್ಲಿ ತೋರಿದೆ. ಎಂಟು ಕೈಗಳಲ್ಲಿ ಎಂಟು ಆಯುಧ ಇತ್ಯಾದಿ

ವಿಶೇಷಗಳು ಇದ್ದರೂ ಯಾವುದೇ ಒಂದರಿಂದ ಮತ್ತೊಂದು ಮರೆ ಆಗದಂತೆ ರೂಪಿಸಿರುವ ಸಂಯೋಜನೆ ಅನನ್ಯವಾದುದು. ಹಸ್ತ ಹಾಗೂ ಮುಖ ಭಾವಗಳು ಸ್ವಲ್ಪಮಟ್ಟಿಗೆ ಚೋಳ ಶೈಲಿಯನ್ನು ಹೋಲುತ್ತದೆ.

## ಶೈಲಿಯಲ್ಲಿ ಪ್ರಯೋಗಗಳು

ಕಾಲಕಾಲಕ್ಕೆ ಶಿಲ್ಪಸೂತ್ರಗಳಂತಹ ಶಾಸ್ತ್ರಗಳು ಬಂದಿವೆಯಾದರೂ ಇವು ಯಾವುದೇ ಶೈಲಿಯನ್ನು ನಿರ್ದೇಶಿಸುವುದಿಲ್ಲ. ಇಂದು ನಾವು ಚಾಳುಕ್ಯ ಹೊಯ್ಸಳ, ಪಲ್ಲವ, ಚೋಳ ಎಂಬಿತ್ಯಾದಿ ರಾಜಮನೆತನಗಳಿಗೆ ಸಂಬಂಧಿಸಿದಂತೆ ಶೈಲಿಯನ್ನು ಸೂಚಿಸುತ್ತೇವೆ. ಶೈಲಿಯ ವತ್ಯಾಸ ಆಯಾ ಕಾಲದ ಶಿಲ್ಪಿಗಳಿಗೆ ನೀಡಿದ ಸ್ವಾತಂತ್ರ್ಯದಿಂದ ರೂಪುಗೊಂಡಿದ್ದೇ ವಿನಾ ಶಾಸ್ತ್ರಗ್ರಂಥಗಳಿಂದ ಅಲ್ಲ. ಚೋಳರ ಕಾಲದ ಲೋಹ ಶಿಲ್ಪಗಳು ಸಪೂರಾಗಿ ನೀಳವಾಗಿದ್ದರೆ, ಅದಕ್ಕೆ ವಿರುದ್ಧವಾಗಿ ಹೊಯ್ಸಳರ ಶಿಲಾ ಶಿಲ್ಪಗಳು ವಿಡಂಬಿಸಿದಂತೆ ಸ್ಥೂಲ ವಾಗಿರುತ್ತವೆ. ಪಲ್ಲವ ಹಾಗೂ ಬಾದಾಮಿ ಚಾಳುಕ್ಯರಲ್ಲಿ ಆಭರಣಾದಿಗಳು ಹಿತಮಿತವಾಗಿದ್ದರೆ ಹೊಯ್ಸಳ, ವಿಜಯನಗರ ಕಾಲದಲ್ಲಿ ಅಧಿಕವಾಗಿರುತ್ತದೆ. ಇವೆಲ್ಲ ಶಾಸ್ತ್ರಗ್ರಂಥಗಳಲ್ಲಿ ಇರುವಂತಹದಲ್ಲ. ಕೃತಿ ನೋಡಲು ಮುದ್ದಾಗಿ, ಲಕ್ಷಣವಾಗಿ, ಆಕರ್ಷಕವಾಗಿರಬೇಕಾದುದು ಮುಖ್ಯ. ಆಚಾರ್ಯರು ಎಲ್ಲ ಶೈಲಿಗಳೂ ತಮಗೆ ಇಷ್ಟ ಎಂದರೂ ಚೋಳ ಹಾಗೂ ಪಲ್ಲವ ಶೈಲಿ ಅವರಿಗೆ ಹೆಚ್ಚು ಪ್ರಿಯವಾದಂತೆ ಕಂಡುಬರುತ್ತದೆ. ಮುಂಬಯಿಯಲ್ಲಿರುವ ನರ್ತಕಿಯ ಶಿಲ್ಪ, ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿರುವ ಧನ್ವಂತರಿ, ಎಸ್. ಎಸ್. ರಾವ್ ಅವರ ಬಳಿ ಇರುವ ಬನಶಂಕರಿ, ಅಮೆರಿಕೆಯಲ್ಲಿರುವ ಸೂರ್ಯ ಚಂದ್ರ, ಬೆಂಗಳೂರಿನಲ್ಲಿರುವ ಲಲಿತೆ ಹಾಗೂ ಕೃಷ್ಣ, ವಿನಾಯಕ ಹೋಟಲ್ ಅವರಿಗಾಗಿ ರೂಪಿಸಿದ ಗಣೇಶ, ಅಲ್ಲದೆ ಕೊರವಂಜಿ, ಅರ್ಧನಾರೀಶ್ವರ, ತಾಂಡವ ಶಿವ, ಲಕ್ಷ್ಮಿ, ಜ್ಞಾನ ಸರಸ್ವತಿ, ಇತ್ಯಾದಿ ಹಲವಾರು ಶಿಲ್ಪಗಳಲ್ಲಿ ಚೋಳ ಶೈಲಿಯನ್ನು ಗುರುತಿಸಬಹುದು. ಹಿರೇಮಗಳೂರಿನ ರಾಮ, ಲಕ್ಷ್ಮಣ ಹಾಗೂ ಸೀತೆಯರ ಶಿಲ್ಪ ಹೊಯ್ಸಳ ಹಾಗೂ ತಿರುಪತಿಯಲ್ಲಿರುವ ಕೃಷ್ಣದೇವರಾಯ ಹಾಗೂ ದಂಪತಿಯರ ಶಿಲ್ಪ ವಿಜಯನಗರ ಶೈಲಿಗಳಲ್ಲೆ

ಇದ್ದು ಮೂಲವನ್ನು ತದ್ವತ್ತಾಗಿ ಹೋಲುತ್ತವೆ. ಶ್ರೀಗಂಧದಲ್ಲಿ ಕೆತ್ತಿದ ಬುದ್ಧ ಹಾಗೂ ಆತನ ಅನುಯಾಯಿಗಳ ಶಿಲ್ಪ ಟಿಬೆಟ್ ಇತ್ಯಾದಿ ಉತ್ತರ ಭಾರತದ ಶೈಲಿಯಲ್ಲಿಯೇ ಇದ್ದು ಈಗ ಈ ಶಿಲ್ಪ ಜಪಾನಿನಲ್ಲಿದೆ. ಗ್ರೀಕ್‌ನ ಧನ್ವಂತರಿಯಾದ ಹಿಪ್ಪೋಕ್ರೆಟೀಸ್ ಮೂರ್ತಿಯನ್ನು ಗ್ರೀಕ್ ಶಿಲ್ಪ ಶೈಲಿಯಲ್ಲಿಯೇ ರೂಪಿಸಿದ್ದು ಬೆಂಗಳೂರಿನಲ್ಲಿದೆ.

ಲೇಪಾಕ್ಷಿಯ ಭಿತ್ತಿಚಿತ್ರಗಳನ್ನು ಅನುಸರಿಸಿ ರೂಪಿಸಿರುವ ಉಬ್ಬುಶಿಲ್ಪದ ಫಲಕಗಳು, ಕಲ್ಕತ್ತದ ವೆಲ್ಲಿಂಗ್‌ಟನ್ ಪ್ಯಾಲೆಸ್‌ಗೆ ರಚಿಸಿದ ವಿಷ್ಣು, ರಾಮ, ಶಿವ ಮುಂತಾದವರಿಂದ ಕೂಡಿದ ಪಟ್ಟಿಕೆಗಳಲ್ಲದೆ ಕೊಳಲ ಗೋಪಾಲ, ಗುರುವಾಯೂರಪ್ಪ, ನಟರಾಜ, ವಿದೇಶದಲ್ಲಿರುವ ನಾಟ್ಯಕೃಷ್ಣ, ಹಾವೇರಿಯಲ್ಲಿರುವ ಭಕ್ತ ಮಾರ್ಕಂಡೇಯ ಇತ್ಯಾದಿ ಶಿಲ್ಪಗಳು ನೈಜವಾದ ರೂಪಾಲಂಕಾರಗಳಿಂದ ಕೂಡಿದ್ದು ಯಾವುದೇ ಶೈಲಿಯನ್ನು ನಿರ್ದೇಶಿಸಲು ಸಾಧ್ಯವಾಗುವುದಿಲ್ಲ. ಇವಲ್ಲದೆ ಬೆಂಗಳೂರಿನ ಉತ್ತರ ಹಳ್ಳಿಯ ಗಾಯತ್ರಿ ದೇವಾಲಯ, ಸುಬ್ರಹ್ಮಣ್ಯಪುರದಲ್ಲಿರುವ ಕೋದಂಡರಾಮ ಹಾಗೂ ಸುಬ್ರಹ್ಮಣ್ಯೇಶ್ವರ ಮುಂತಾದ ಅನೇಕ ಸ್ಥಳಗಳಲ್ಲಿ ಶ್ರೀಯುತರ ಶಿಲ್ಪ ಕಾಣಬಹುದು. ಖ್ಯಾತ ಕಲಾವಿದ ಶಂಖು ಚೌಧರಿ ಅವರಿಗೆ ಅವರ ಆರಾಧ್ಯ ದೇವತೆ ದುರ್ಗಾಮಾತೆಯನ್ನು ರಚಿಸಿಕೊಟ್ಟಿದ್ದಾರೆ. ಯೂನಿಟಿ ಬಿಲ್ಡಿಂಗ್ ನಲ್ಲಿಯ ಜನಾರ್ಧನ ಸಿಲ್ಕ್ ಹೌಸ್‌ನಲ್ಲಿರುವ ಕೃತಿಯಲ್ಲಿ ಕಂಬಗಳ ಮಾಟ, ಸೂಕ್ಷ್ಮಕೆತ್ತನೆ ಅಲಂಕಾರಗಳು ಬೇಲೂರಿನ ಚೆನ್ನಕೇಶವ ದೇವಾಲಯವನ್ನು ನೆನಪಿಸುವಂತಿದೆ.

ಉತ್ತರ ಕರ್ನಾಟಕದಲ್ಲಿರುವ ಅಕ್ಕಮಹಾದೇವಿ, ಬಸವೇಶ್ವರ, ದೆಹಲಿಯಲ್ಲಿರುವ ಗಾಂಧಿ, ಗಾಂಧಿನಗರ ಶಾಲೆಯಲ್ಲಿರುವ ನೆಹರುಗಳಲ್ಲದೆ ಜೀಸಸ್, ಅಂಬೇಡ್ಕರ್, ಕೆ. ಸಿ. ರೆಡ್ಡಿ. ಮುಂತಾದ ದೇಶಭಕ್ತರ, ಸಮಾಜ ಸೇವಕರ ಶಿಲ್ಪಗಳನ್ನೂ ಆಚಾರ್ಯರು ನೈಜವೆಂಬಂತೆ ರೂಪಿಸಿದ್ದಾರೆ. ಸನ್ನತಿಯ ಚಂದ್ರಲಾಂಬ ದೇವಾಲಯಕ್ಕೆ ಗಣೇಶ ಕಾಳಿ ಇತ್ಯಾದಿ ಹಲವಾರು ಶಿಲ್ಪಗಳನ್ನು ರಚಿಸಿಕೊಟ್ಟಿದ್ದಾರೆ.

ದೆಹಲಿಯ ಕ್ರಾಫ್ಟ್ ಮ್ಯೂಸಿಯಂ, ಮುಂಬಯಿಯ ಅಗರವಾಲ ಹೌಸ್, ಲಲಿತ ಕಲಾ ಅಕಾಡಮಿ, ಚಿತ್ರಕಲಾ ಪರಿಷತ್, ಅಮೆರಿಕದ ಅಮರ್ ಏಷ್ಯಾ ಫೈನ್ ಆರ್ಟ್ಸ್‌ಗಳಲ್ಲದೆ ರೋಂ, ಜರ್ಮನಿ, ಸ್ವಿಡ್ಜರ್‌ಲ್ಯಾಂಡ್ ಮೊದಲಾದ ಕಡೆಗಳಲ್ಲಿ ಆಚಾರ್ಯರ ಶಿಲ್ಪಗಳು ಇರುವುದಾಗಿ ತಿಳಿದು ಬರುತ್ತದೆ.

**ಕೃತಿ ವಿಮರ್ಶೆ**

ಪರಮೇಶ್ವರಾಚಾರ್ಯರ ಕೃತಿಗಳಲ್ಲಿಯ ನಿರ್ವಹಣಾ ಕೌಶಲ್ಯ, ಸೌಂದರ್ಯ ಪರತೆ, ಶ್ರೇಷ್ಠತೆ ಇತ್ಯಾದಿಗಳನ್ನು ಪ್ರತ್ಯೇಕವಾಗಿ ಗುರುತಿಸಿ ಹೇಳಲು ಸಾಧ್ಯವಿಲ್ಲ. ಕಾರಣ ಅವರು ರಚಿಸಿದ ಕೃತಿಗಳೆಲ್ಲವೂ ಬಿಕರಿಯಾಗಿವೆ. ಅಥವ ಸಹೃದಯರ ಸಂಗ್ರಹದಲ್ಲಿವೆ. ದೇಶ ವಿದೇಶಗಳಲ್ಲಿ ಚದುರಿಹೋಗಿವೆ. ಬೆಂಗಳೂರಿನ ಕೆಲವು ಪ್ರದೇಶಗಳಲ್ಲಿ ಇರುವುದು ಬಿಟ್ಟರೆ ಕ್ರಾಫ್ಟ್ ಕೌನ್ಸಿಲ್‌ನಲ್ಲಿ ಕೆಲವು ಉತ್ತಮ ಕೃತಿಗಳಿವೆ. ಮಾಲಿಕರಿಗೆ ಕೃತಿಗಳನ್ನು ಕೊಡುವ ಮೊದಲು ಅದರ ಛಾಯಾಚಿತ್ರ ತೆಗೆದಿರಿಸುವ ವಿಚಾರವೂ ಅವರಿಗಿರಲಿಲ್ಲ. ಈಚಿನ ಹತ್ತಾರು ವರ್ಷಗಳಿಂದ ಆ ಕೆಲಸ ಮಾಡಿಸುತ್ತಿದ್ದು ಆಚಾರ್ಯರ ಕೆಲವು ಕೃತಿಗಳನ್ನು ಛಾಯಾಚಿತ್ರ ರೂಪದಲ್ಲಿಯಾದರೂ ಕಾಣಬಹುದಾಗಿದೆ.

ದೂರವಾಣಿ ಇಲಾಖೆಯ ಮುಖ್ಯಸ್ಥರಾಗಿದ್ದ ಎಸ್. ಎಸ್. ರಾವ್ ಅವರಿಗೆ ರೂಪಿಸಿಕೊಟ್ಟ 'ಬನಶಂಕರಿ' ವಿಗ್ರಹ ಅಪರೂಪದ ಸಂಯೋಜನೆಯನ್ನು ಹೊಂದಿದೆ. ಎರಡು ಆನೆಗಳು ಕುಂಭಸ್ಥಳದ ಮೇಲೆ ಕಾಲಿರಿಸಿ ನಿಂತಿರುವ ಸಿಂಹ, ಆನೆಯ ಪಕ್ಕದಲ್ಲಿ ಶರಣಾಗಿಬಿದ್ದಿರುವ ರಾಕ್ಷಸರು ಅವರ ತಲೆಯ ಮೇಲೆ ಕಾಲಿರಿಸಿರುವ ಬನಶಂಕರಿ. ಅಕ್ಕ ಪಕ್ಕದಲ್ಲಿ ಲಕ್ಷ್ಮಿ-ಸರಸ್ವತಿಯರು ಅವರ ಹಿಂದೆ ಅಕ್ಕಪಕ್ಕಗಳಲ್ಲಿ ಚಾಮರಧಾರಣಿಯರು. ಸಿಂಹದ ಮೇಲೆ ಎರಡೂ ಕಾಲುಗಳನ್ನು ಆಚೀಚೆ ಇರಿಸಿ ಭದ್ರವಾಗಿ ಕುಳಿತಿರುವ ಬನಶಂಕರಿ, ಆಚೀಚೆ ತಲಾ ನಾಲ್ಕು ಕೈಗಳು ಅವುಗಳಲ್ಲಿ ಗಂಟೆ, ಚಕ್ರ, ತ್ರಿಶೂಲ, ಕತ್ತಿ, ಬಲಬದಿಗೂ, ಅಮೃತ ಕುಂಭ, ಗುರಾಣಿ, ಶಂಖ, ಡಮರು ಎಡಬದಿಗೂ ಹಿಡಿದಿದ್ದಾಳೆ. ಸುತ್ತ ಪ್ರಭಾವಳಿಯಿದ್ದು ಅವುಗಳ ಮೇಲೆ ಹಾರುತ್ತಿರುವ ಗಂಧರ್ವರಿದ್ದು


ಬನಶಂಕರಿ

ಹೂಮಳೆ ಕರೆಯುತ್ತಿದ್ದಾರೆ. ಇಡಿ ಫಲಕ ದುಂಡು ಸಂಯೋಜನೆಗೆ (Round Composition) ಉತ್ತಮ ಉದಾಹರಣೆ ಯೆಂಬಂತಿದೆ. ಇಡೀ ಫಲಕದ ಮಧ್ಯದಲ್ಲಿ ಸಿಂಹ ಮುಖ, ಅದರ ಮೇಲೆ ಲಂಬವಾಗಿ ಏರುತ್ತ ಹೋಗುವ ಬನಶಂಕರಿಯ ದೇಹ ಭಾಗ, ಸ್ನಿಗ್ಧ, ಧೀರ, ಗಂಭೀರ ವದನ, ಸಿಂಹ ಶೀರ್ಷದ ಕೆಳಗೆ ಅದರ ಪಾದ, ಆನೆಯ ಕುಂಭಸ್ಥಳ ಹಾಗೂ ಸೊಂಡಿಲು ಇವು ಇಡೀ ಫಲಕ ವನ್ನು ನೇರವಾಗಿ ಅರ್ಧಕ್ಕೆ ವಿಭಾಗಿಸುತ್ತದೆ. ಆನೆಯ ಸೊಂಡಲಿ ನಿಂದ ದೃಷ್ಟಿ ಬಲಕ್ಕೆ ರಾಕ್ಷಸ, ಸರಸ್ವತಿ, ಚಾಮರಧಾರಣಿಯರ ಮೂಲಕ ಪ್ರಭಾವಳಿ ಮೇಲೆ ಬಾಗುತ್ತಾ ಇನ್ನೊಂದು ಬದಿಗೆ ಹೋಗಿ ಅಲ್ಲಿಯ ಚಾಮರ ಧಾರಿಣಿ, ಲಕ್ಷ್ಮಿಯ ಮೂಲಕ ದೃಷ್ಟಿ ಕೆಳಗಿಳಿದು ರಾಕ್ಷಸನ ಹಾಗೂ ಆನೆಯ ಸೊಂಡಲಿನಿಂದ ಸಿಂಹದ ಕಾಲುಗಳ ಮೂಲಕ ಮೇಲೇರಿ ಸಿಂಹ ಮುಖದಲ್ಲಿ ಇಲ್ಲವೆ ದೇವಿಯ ಕೊರಳಿನ ಹಾರದ ಮೂಲಕ ಮುಂದುವರಿದು ಆಕೆಯ ಮುಖದಲ್ಲಿ ದೃಷ್ಟಿ ನೆಲೆಸುತ್ತದೆ. ಇದು ಹೊರವೃತ್ತದಾದರೆ ದೇವಿಯ ಕೈಗಳಲ್ಲಿರುವ ಆಯುಧ ಇತ್ಯಾದಿ ವಿಶೇಷಗಳು ಇನ್ನೊಂದು ಒಳವೃತ್ತವನ್ನು ಸೃಷ್ಟಿಸುತ್ತದೆ. ಇಡೀ ಪ್ರಭಾವಳಿಯ ಮೇಲಿರುವ ಸಿಂಹ ಮುಖ ಫಲಕದ

ಮಧ್ಯದಲ್ಲಿರುವ ಸಿಂಹದ ಮುಖಕ್ಕೆ ಸಾಟಿಯಾಗುತ್ತದೆ. ರಾಕ್ಷಸರ ವಿನಾ ಎಲ್ಲರೂ ಸ್ತ್ರೀ ಆಕೃತಿಗಳೇ ಆಗಿದ್ದು ಹಿತಮಿತವಾಗಿ ವಸ್ತ್ರಾಭರಣ ಧರಿಸಿದ್ದಾರೆ. ಲಕ್ಷ್ಮಿ, ಸರಸ್ವತಿಯರ ವೀಣೆ ಇತ್ಯಾದಿಗಳು, ಚಾಮರಧಾರಣಿಯ ಚಾಮರ, ದೇವಿಯ ಹಾಗೂ ರಾಕ್ಷಸರ ಆಯುಧಗಳು ಎಲ್ಲವೂ ಸೇರಿ ಇಪ್ಪತ್ತಕ್ಕು ಹೆಚ್ಚು ಉಪಕರಣಗಳು, ಗಂಧರ್ವರೂ ಸೇರಿ ಒಂಬತ್ತು ವ್ಯಕ್ತಿಗಳು, ಆನೆಗಳು, ಸಿಂಹ ಇವಿಷ್ಟು ಇದ್ದು ಫಲಕದಲ್ಲಿ ಸಮನ್ವಯ ಸಾಧಿಸಿರುವುದು ಎಲ್ಲವೂ ಅಡಕಿದಂತೆ ತೋರದೆ ವಿರಳವಾಗಿರುವುದು ಯಾವುದೇ ಉಪಕರಣವಾಗಲೀ ವ್ಯಕ್ತಿಯಾಗಲೀ ದೃಷ್ಟಿಗೆ ಅಡ್ಡ ಬರದಂತೆ ಇರುವುದು (overlap) ಮುಖ್ಯವಾಗಿ ದುಂಡು ಸಂಯೋಜನೆಯನ್ನು ಸಾಧಿಸಿರುವುದು, ಇಡೀ ಫಲಕದಲ್ಲಿ ಒಂದೇ ಒಂದು ಅಂಗುಲ ಜಾಗವೂ ವ್ಯರ್ಥವಾಗಿ ಬಿಡದಂತೆ ಎಲ್ಲವೂ ಪೂರ್ವಯೋಜಿತವಾಗಿ ನಿರ್ಧರಿಸಿರುವುದು ಕಲಾವಿದನ ಜಾಣ್ಮೆ, ಪ್ರೌಡತೆಯನ್ನು ಮೆರೆಯುತ್ತದೆ. ಈ ಬಗೆಯ ವೃತ್ತ ಸಂಯೋಜನೆಯನ್ನು ಚಿತ್ರಕಲೆಯಲ್ಲಿ ಮಂಡಳವೆಂಬಂತೆ ವರ್ಣಿಸಲಾಗಿದೆ. ಈ ಬಗೆಯ ರಚನೆ ಅಜಂತೆಯಲ್ಲಿದ್ದು, ಮಂಡಳಗಳನ್ನು ಬೌದ್ಧ ತಾಂತ್ರಿಕ ಆರಾಧನೆಯಲ್ಲಿ ಮುಖ್ಯವಾಗಿ ಪರಿಗಣಿಸಲಾಗಿದ್ದು ಅವುಗಳಿಗೆ ಧೀರ್ಘವಾದ ತಾತ್ವಿಕ ಹಿನ್ನೆಲೆಯಿದೆ. ಬಾದಾಮಿಯ ನಟರಾಜ ಸಹ ಇದೇ ರೀತಿ ವೃತ್ತ ಸಂಯೋಜನೆ ಹೊಂದಿದ್ದು ಅವುಗಳಲ್ಲಿ ಕಾಲ ದೇಶ ಇತ್ಯಾದಿ ಹಲವಾರು ನಿಟ್ಟುಗಳಿಂದ ನೋಡಲಾಗಿದೆ. ಪ್ರಸ್ತುತ ಪರಮೇಶ್ವರಾಚಾರ್ಯರ 'ಬನಶಂಕರಿ'ಯನ್ನು ಈ ರೀತಿ ನೋಡಲು ಸಾಧ್ಯವಿದೆ.

## ಧನ್ವಂತರಿ

ಬೆಂಗಳೂರಿನ ವೈದ್ಯಕೀಯ ಕಾಲೇಜಿನಲ್ಲಿರುವ 'ಧನ್ವಂತರಿ'ಯ ಶಿಲ್ಪ ಇನ್ನೊಂದು ಅಪರೂಪದ ರಚನೆ. ನಾಭಿಯ ಬಳಿ ಎರಡೂ ಕೈ ಜೋಡಿಸಿ, ಪದ್ಮಾಸನ ಹಾಕಿ ಕುಳಿತಿರುವ ನಾರಾಯಣ ಹಾಗೂ ಆತನ ಕೈಯಲ್ಲಿ ಆತನ ಮಾನಸಪುತ್ರ ಧನ್ವಂತರಿಯ ಮೂರ್ತಿ ಕುಳಿತಿರುವಂತೆ ರೂಪಿಸಲಾಗಿದೆ. ಬೃಹದಾಕಾರದ ನಾರಾಯಣನ ಕೈಗಳಲ್ಲಿ ಪುಟ್ಟದಾದ ಧನ್ವಂತರಿಯ ಮುದ್ದಾದ


‘ಧನ್ವಂತರಿ’

ಶಿಲ್ಪವಿದೆ. ದೇವ ವೈದ್ಯನಾದ ಧನ್ವಂತರಿ ಸಮುದ್ರ ಮಥನ ಕಾಲದಲ್ಲಿ ಅಮೃತವನ್ನು ಹಿಡಿದುಕೊಂಡೇ ಹುಟ್ಟಿದವನು. ನಾರಾಯಣನ ಅಪ್ಪಣೆಯಂತೆ ಕಾಶೀರಾಜನಾಗಿದ್ದ ‘ದೀರ್ಘತಪಸ್ಸಿ’ನ ಮಗನಾಗಿ ಜನಿಸಿ ಆಯುರ್ವೇದ ವೈದ್ಯ ಶಾಸ್ತ್ರವನ್ನು ಎಂಟು ಭಾಗಗಳಾಗಿ ವಿಂಗಡಿಸಿ ಅದರಲ್ಲಿ ಯಜ್ಞ ಭಾಗದಲ್ಲಿ ಭಾಗಿಯಾದಾತ. ಈ ಧನ್ವಂತರಿಯ ಶಿಲ್ಪ ಊರ್ಧ್ವ ಮುಖ ತ್ರಿಕೋಣಾಕಾರ ವನ್ನು ಸಾಧಿಸಿರುವುದನ್ನು ಕಾಣಬಹುದು. ನಾರಾಯಣನ ಮಡಿಸಿದ ಮಂಡಿಗಳ ಹೊರಭಾಗ ಹಾಗೂ ಮೇಲ್ಭಾಗದಲ್ಲಿ ಕಿರೀಟದ ತುದಿಯ ಭಾಗ. ಈ ಮೂರು ಸ್ಥಳಗಳಲ್ಲಿ ಮೂರು ಬಿಂದುಗಳನ್ನು ಇರಿಸಿ ಅವನ್ನು ಪರಸ್ಪರ ಗೆರೆ ಎಳೆದು ಸೇರಿಸಿದಾಗ ಊರ್ಧ್ವ ಮುಖ ತ್ರಿಕೋಣಾಕಾರ ರೂಪಿತವಾಗುತ್ತದೆ. ನಾರಾಯಣನ ಇಡೀ ಶರೀರ ಈ ತ್ರಿಕೋಣದೊಳಗೇ ಸಂಯೋಜಿಸಿದೆ. ಈ ಬಗೆಯ ಊರ್ಧ್ವ ಮುಖ ತ್ರಿಕೋಣದಿಂದಾಗಿ, ಮುಖ್ಯ ಆಕೃತಿ ಔನ್ನತ್ಯವನ್ನು ಸಾಧಿಸುತ್ತದೆ ಎಂದು ಪಾಶ್ಚಿಮಾತ್ಯ ಚಿತ್ರಕಲೆಯ ವ್ಯಾಕರಣ ಅಭಿಪ್ರಾಯ ಪಡುತ್ತದೆ. ಪ್ರಸ್ತುತ ಶಿಲ್ಪದಲ್ಲಿ ಇದು ಸಾಧ್ಯವಾಗಿದೆ. ಇಲ್ಲಿ ಇನ್ನೂ ಮುಂದುವರಿದು ಅಧೋ ಮುಖ ತ್ರಿಕೋಣವನ್ನು ಗುರುತಿಸಬಹುದು. ಎತ್ತಿದ ಕೈಗಳಲ್ಲಿರುವ ಶಂಖ

ಚಕ್ರಗಳನ್ನು ಬಿಂದುಗಳಾಗಿಸಿ ಕೆಳಗೆ ಪದ್ಮದ ಮಧ್ಯದಲ್ಲಿರುವ ವಸ್ತ್ರದ ನೆರಿಗೆಯನ್ನು ಮೂರನೆಯ ಬಿಂದುವಾಗಿಸಿದಲ್ಲಿ ಅದರಿಂದ ರಚಿತವಾಗುವ ತ್ರಿಕೋಣ ಅಧೋ ಮುಖ ತ್ರಿಕೋಣವಾಗುತ್ತದೆ. ಎಂದರೆ ಊರ್ಧ್ವ ಮುಖದ ಮೇಲೆಯೇ ಅಧೋಮುಖ ತ್ರಿಕೋಣವೂ ಇರಿಸಿದಂತಾಗುತ್ತದೆ. ಈ ರೀತಿ ಎರಡೂ ತ್ರಿಭುಜಗಳನ್ನೂ ಪರಸ್ಪರ ಇರಿಸುವುದು ಹಾಗೂ ಅದರಿಂದ ಉತ್ಪತ್ತಿಯಾಗುವ ಆರು ದಳಗಳಂತಹ ರಚನೆ, ಮೇಲು ಮುಖದ ತ್ರಿಕೋಣ ಪುರುಷ ಶಕ್ತಿ ಎಂದೂ ಕೆಳ ಮುಖದ ತ್ರಿಕೋಣ ಸ್ತ್ರೀ ಶಕ್ತಿ ಎಂದೂ ಕರೆದಿದ್ದು ಎರಡು ತ್ರಿಭುಜಗಳ ಮಧ್ಯೆ ಬೀಜಾಂಕುರದಂತೆ ಬಿಂದು ಇರುವುದು. ಆ ಮೂಲಕ ಇಡೀ ಸೃಷ್ಟಿ ವೈಚಿತ್ರವನ್ನು ಭಾರತೀಯ ಶಾಸ್ತ್ರಗ್ರಂಥಗಳಲ್ಲಿ ಕಾಣಬಹುದು. ಇಲ್ಲಿಯೂ ಇಡೀ ಫಲಕದ ಮಧ್ಯ ಭಾಗದಲ್ಲಿ ಧನ್ವಂತರಿಯ ಮುಖ ಭಾವ ಬಿಂದು ರೂಪದಂತೆ ಕಂಡು ಬರುತ್ತದೆ. ಕೆಳಗಿನ ಪದ್ಮ ಹಾಗೂ ಮೇಲೆ ಹಾರುತ್ತಿರುವ ಗಂಧರ್ವರು ಇಡೀ ಫಲಕವನ್ನು ಸಮತೋಲನಗೊಳಿಸುತ್ತದೆ. ಇನ್ನೊಂದು ವ್ಯಾಖ್ಯಾನದಂತೆ ಈ ತ್ರಿಕೋಣಗಳು ಗಣಪತಿಯ ಪ್ರತಿಮೆಗೆ ಮೂಲ. ಇವೆಲ್ಲ ಉದ್ದೇಶ ಪೂರ್ವಕವಾಗಿ ಈ ಧನ್ವಂತರಿ ಪ್ರತಿಮೆಯಲ್ಲಿ ಕಾಣಬೇಕಿಲ್ಲವಾದರೂ ಈ ಸಂಯೋಜನೆ ಕೃತಿಯ ಔನ್ನತ್ಯವನ್ನು ಯಶಸ್ವಿಯಾಗಿ ಸಾಧಿಸಿದೆ ಎಂದು ಹೇಳಬಹುದು.

**ನಿರೂಪಣಾ ಚಿತ್ರ**

ಪರಮೇಶ್ವರಾಚಾರ್ಯರು ಎಲ್ಲ ಬದಿಯಿಂದಲೂ ಗೋಚರಿಸುವಂತಹ ದುಂಡು ಶಿಲ್ಪವನ್ನು ರೂಪಿಸಿರುವಂತೆಯೇ ಫಲಕಗಳ ಮೇಲೂ ಉಬ್ಬುಗೆತ್ತನೆ (relief) ಶಿಲ್ಪಗಳನ್ನು ರಚಿಸಿರುವುದುಂಟು. ನಮ್ಮ ಶಾಸ್ತ್ರಗ್ರಂಥಗಳು ಚಿತ್ರ ಚಿತ್ರಾರ್ಧ, ಚಿತ್ರಾಭಾಸ ಎಂದು ಚಿತ್ರ, ಶಿಲ್ಪಗಳನ್ನು ಮೂರು ಭಾಗಗಳಾಗಿ ವಿಂಗಡಿಸಿವೆ. ಅದರಂತೆ 'ಚಿತ್ರ' ಎಂದರೆ ಎಲ್ಲ ಬದಿಯಿಂದಲೂ ನೋಡಬಹುದಾದಂತಹ, ಮುಂಭಾಗದಂತೆಯೇ ಹಿಂಭಾಗವೂ ಪೂರೈಸಿರುವಂತಹ ಶಿಲ್ಪಗಳೆಂದೂ, 'ಚಿತ್ರಾರ್ಧ' ಅಥವ 'ಅರ್ಧಚಿತ್ರ' ಗಳೆಂದರೆ ಫಲಕದ ಮೇಲೆ

ಉಬ್ಬಿರುವಂತೆ ರಚಿಸಿದ ಶಿಲ್ಪ ಎಂದೂ; 'ಚಿತ್ರಾಭಾಸ' ಎಂದರೆ ಚಿತ್ರಕಲೆ ಎಂದೂ ಅರ್ಥೈಸಿದೆ. ಪಾಶ್ಚಿಮಾತ್ಯ ವ್ಯಾಖ್ಯಾನದಂತೆ ಫಲಕದ ಮೇಲೆ ಉಬ್ಬು ಶಿಲ್ಪಗಳು ಉಬ್ಬಿರುವಿಕೆಯನ್ನು ಅನುಸರಿಸಿ ಕಡಿಮೆ ಉಬ್ಬಿರುವಿಕೆ (low relief) ಹೆಚ್ಚು ಉಬ್ಬಿರುವಿಕೆ (high relief) ಎಂದೆಲ್ಲ ವರ್ಗೀಕರಿಸಿದೆ. ಧನ್ವಂತರಿಯ ಶಿಲ್ಪ ಹೈ ರಿಲೀಫ್ ಮಾದರಿಗೆ ಸೇರಿಸಬಹುದು. ಅಂತೆಯೆ ಶಿವಪರಿವಾರ, ನ್ಯಾಯದ ಗಂಟೆ, ಪಾರ್ಶ್ವನಾಥನ ಜನನ ಇತ್ಯಾದಿ ಫಲಕಗಳನ್ನು ಲೋ ರಿಲೀಫ್ ವರ್ಗಕ್ಕೆ ಸೇರಿಸಬಹುದು.

ಯಾವುದೇ ಶಿಲ್ಪಗಳಲ್ಲಿ ಮುಖ್ಯವಾಗಿ ಕಾಣವುದು ಮುಖ್ಯವ್ಯಕ್ತಿಯನ್ನು ಪ್ರಧಾನವಾಗಿ ಮಧ್ಯೆ ಊರ್ಧ್ವಮುಖವಾಗಿ ಇರಿಸಿರುವುದು ಉಳಿದ ಪರಿಕರಗಳು ಚಿಕ್ಕ ಚಿಕ್ಕ ಅಳತೆಯಲ್ಲಿ ಆಚೀಚೆ ಇರಿಸಿರುವುದು. ಈ ಬಗೆಯ ಉದ್ದ ಸಂಯೋಜನೆ (vertical composition)ಯನ್ನು ಕೊಳಲು ಗೋಪಾಲ, ಗೊಮ್ಮಟ ಮುಂತಾದ ಶಿಲ್ಪಗಳಲ್ಲಿ ಕಾಣಬಹುದು. ಇನ್ನೊಂದು ಬಗೆಯ ಸಂಯೋಜನೆಯೆಂದರೆ ಅಡ್ಡಕ್ಕೆ ವಿಸ್ತರಿಸಿರುವ ಫಲಕಗಳು (horizontal composition) ಇವು ಎತ್ತರದಲ್ಲಿ ಕಡಿಮೆಯಿದ್ದು ಅಡ್ಡದಲ್ಲಿ ಎಷ್ಟು ಬೇಕಾದರು ಹೊಂದಿಸಿಕೊಳ್ಳಬಹುದು. ಸಾಮಾನ್ಯವಾಗಿ ನಿರೂಪಣಾ ಚಿತ್ರಗಳಿಗೆ (narrative) ಈ ಬಗೆಯ ಸಂಯೋಜನೆ ಹೆಚ್ಚು ಸೂಕ್ತ.

**ಮೆರವಣಿಗೆ**

ನಂದಿವಾಹನ ಶಿವನ ಉತ್ಸವ ದೃಶ್ಯದಲ್ಲಿ ಉಳಿದ ಗಣಗಳೆಲ್ಲ ಯಕ್ಷರಂತೆ ಕುಬ್ಜಾಕಾರದಲ್ಲಿರುವುದರಿಂದ ಶಿವ ಪ್ರಧಾನವಾಗಿ ಕಾಣುತ್ತಾನೆ. ಗಣಗಳ ಕೈಲಿ ಇರುವ ಹಲವಾರು ಬಗೆಯ ವಾದ್ಯಗಳು ಸಂಯೋಜನೆಗೆ ಪೂರಕವಾಗಿವೆ. ಇಲ್ಲಿಯೂ ಗಂಧರ್ವರು ಆಕಾಶದಿಂದ ಹೂಮಳೆಗರೆಯುತ್ತಿರುವರಲ್ಲದೆ ಮೋಡಗಳ ಮಧ್ಯೆ ಸಕಲ ದೇವತೆಗಳೂ ನೆರೆದಿದ್ದಾರೆ. ಇಡೀ ಫಲಕ ಏಕವರ್ಣದಲ್ಲಿ ರಚಿತವಾದ ಚಿತ್ರಕಲೆಯಂತೆ ಶೋಭಾಯಮಾನವಾಗಿದೆ.

ಆಕಾರಗಳ ಬಿಡುವಿನ ಸ್ಥಳದಲ್ಲಿರುವ ಭಾಗ (negative space) ಸಹ ಸಂಯೋಜನೆಗೆ ಪೂರಕವಾಗಿ. ಮೆರವಣಿಗೆ ಮುಂದುವರಿಯುತ್ತಿದೆಯೋ ಎಂಬಂತೆ ಎಲ್ಲ ಆಕಾರಗಳೂ ಚಲನಶೀಲವಾಗಿವೆ. ಮೆರವಣಿಗೆಯಲ್ಲಿ ತೀರಾ ಮುಂದೆ ಇರುವಾತ ಹಿಡಿದಿರುವ ಕಹಳೆ ತನ್ನ ಆಕಾರದಿಂದಾಗಿ ನೋಡುಗನ



ನಂದಿವಾಹನ ಶಿವನ ಮೆರವಣಿಗೆ

ನೋಟವನ್ನು ಮೆರವಣಿಗೆಯ ಹಿಂಭಾಗಕ್ಕೆ ಕಳಿಸಿದರೆ, ಕೊನೆಯಲ್ಲಿ ಇರುವಾತ ಹಿಡಿದಿರುವ ಓಲಗ ತನ್ನ ಆಕೃತಿಯಿಂದಾಗಿ ನೋಟವನ್ನು ಕ್ರಮೇಣ ಮುಂಭಾಗಕ್ಕೆ ಕಳಿಸುತ್ತದೆ. ಈ ಕ್ರಿಯೆಯೇ ಮೆರವಣಿಗೆಯ ಚಲನಶೀಲತೆಯನ್ನು ಹೆಚ್ಚಿಸುತ್ತದೆ.

ವಿಜಯ ನಗರದ ಕಾಲದ ವೇಳೆಗೆ ಸಂಯೋಜನೆಯಲ್ಲಿ ಮೇಲಿನ ತೆರಪಿನ ಜಾಗದಲ್ಲಿ ಹಾರುತ್ತಿರುವ ಗಂಧರ್ವರ ಬದಲು ಬಟ್ಟೆಯ ತೆರೆಗಳು, ಹೂಮಾಲೆ ಇತ್ಯಾದಿಗಳು ಬಂದಿದ್ದು ಈ ಫಲಕದಲ್ಲೂ ಅವನ್ನೇ ಬಳಸಲಾಗಿದೆ.

ಪಾರ್ಶ್ವನಾಥನ ಜನನ ಸಂದರ್ಭದ ದೃಶ್ಯದಲ್ಲಿ ಪಾಶ್ವನಾಥನ ಗರ್ಭವತಿ ತಾಯಿಯಲ್ಲದೆ, ತಂದೆಯೊಂದಿಗೆ ಪರಿವಾರದವರು ಧ್ಯಾನಾಸಕ್ತರಾಗಿ ಕುಳಿತಿದ್ದಾರೆ. (ಮೂಲದಲ್ಲಿ ಇಡೀ ಕಥೆ ಬೇರೆ ಬೇರೆ, ಬಿಡಿಯಾಗಿ ಕಥಾ ನಿರೂಪಣೆಯಂತೆ ಜಾಲಂದ್ರದಲ್ಲಿ ಕಡೆದಿದ್ದು ಇಲ್ಲಿ ಇದರ ಒಂದು ದೃಶ್ಯವನ್ನು ಮಾತ್ರ ಆಚಾರ್ಯರು ಆಯ್ಕೆ ಮಾಡಿಕೊಂಡಿದ್ದಾರೆ.) ಹಿತ ಮಿತ ವಸ್ತ್ರಾಭರಣ, ವಿನಯ ತುಂಬಿದ ನಿಲವು ಎಲ್ಲರ ಮುಖದಲ್ಲಿ ಹಿಗ್ಗಿನ ಸಂತೋಷದ ಭಾವನೆ. ಸ್ನಿಗ್ಧವಾದ ಚಲನ ರಹಿತ ಮೌನ ಇವೆಲ್ಲವೂ ಜೈನ ತತ್ವದ ನಿರಾಡಂಬರತೆಯನ್ನು, ಪರಿಪೂರ್ಣತೆಯನ್ನು, ಅರ್ಥಪೂರ್ಣವಾಗಿ ಬಿಂಬಿಸುತ್ತದೆ.

**ಸಾಮಾಜಿಕ**

ಆಚಾರ್ಯರು ವಂಶಪಾರಂಪರ್ಯವಾಗಿ ಪೌರಾಣಿಕ ಶಿಲ್ಪಗಳನ್ನೇ ಮಾಡುತ್ತಿದ್ದು, ಒಟ್ಟು ಭಾರತೀಯ ಚಿತ್ರ, ಶಿಲ್ಪಗಳಲ್ಲಿ ಸಾಮಾನ್ಯ ವ್ಯಕ್ತಿಯ ಚಿತ್ರಣ ಕಡಿಮೆಯೆಂದೇ ಹೇಳಬಹುದು. ಆಚಾರ್ಯರು ಗಾಂಧಿ, ನೆಹರು, ಅಂಬೇಡ್ಕರ್ ಇತ್ಯಾದಿ ರಾಷ್ಟ್ರ ಪ್ರಮುಖರ ಶಿಲ್ಪವನ್ನು ಬಿಡಿಸಿದ್ದು ಅವು ಮೂಲಕ್ಕೆ ತೀರಾ ಹೋಲುವಂತಿರುವುದು ಹಾಗೂ ಪ್ರಶಂಸೆಗಳಿಸಿರುವುದು ಸರ್ವವಿದಿತ, ಮುಂಬಯಿಯಲ್ಲಿರುವ ನರ್ತಕಿಯ ಶಿಲ್ಪವೊಂದು ಆಚಾರ್ಯರ ಸಾಮಾಜಿಕ ಚಿತ್ರಣಕ್ಕೆ ಉದಾಹರಣೆಯಾಗಿದೆ. ಇಲ್ಲಿ ನರ್ತಕಿ ನರ್ತಿಸುತ್ತಿಲ್ಲ. ಬದಲು ಪೀಠವೊಂದರ ಮೇಲೆ ಕುಳಿತು ಎಡಗಾಲು ಪೀಠದ ಮೇಲಿರಿಸಿ ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುತ್ತಿರುವ ದೃಶ್ಯವಿದು. ಎಲ್ಲ ಕಡೆಯಿಂದಲೂ ಬಿಡಿಸಿರುವ ದುಂಡು ಶಿಲ್ಪ. ಮುಖ ಭಾವದಲ್ಲಿ ಚೋಳ ಶೈಲಿಯನ್ನು ಗುರುತಿಸಬಹುದಾದರೂ ಆಕಾರ ಸ್ವಲ್ಪ ಸ್ಥೂಲವೆಂದೆನಿಸುತ್ತದೆ. ಕಾಷ್ಠ ಶಿಲ್ಪವಾದರೂ ವಸ್ತ್ರಾಭರಣಗಳಲ್ಲಿ ಹೆಚ್ಚಿನ ಅಲಂಕಾರವಿಲ್ಲ. ಆದರೂ ಕುಳಿತಿರುವ ನಿಲವು, ಗೆಜ್ಜೆಕಟ್ಟುತ್ತಿರುವ ತನ್ಮಯತೆ, ನೀಳ ನಾಸಿಕ, ಸ್ಮಿತವದನ, ಅರೆ ಮುಚ್ಚಿದ ನೇತ್ರ, ತೆಳುವಾದ ಕಟಿಪ್ರದೇಶ, ಪೀನ ಕುಂಭ ಪಯೋಧರ, ಇತ್ಯಾದಿ ಎಲ್ಲ

ಅಂಗೋಪಾಂಗಗಳು ಪ್ರಮಾಣ ಬದ್ಧವಾಗಿದ್ದು ರೂಪದರ್ಶಿಯನ್ನು ಇರಿಸಿಕೊಂಡು ರೂಪಿಸಿದಂತಿದೆ. ಇಲ್ಲಿ ಶಾಸ್ತ್ರದ ತಾಳಮಾನದ ಕಟ್ಟನ್ನೂ ಮೀರಿ ಅಭ್ಯಾಸ ಪೂರ್ಣ ರಚನೆಯನ್ನು ಕಾಣಬಹುದು. ಬಿಡಿ ಶಿಲ್ಪದ ಒಳಗೆ ಸಂಯೋಜನೆ ಸಹ ಸಾಧ್ಯವಾಗಿದೆ. ಪರಮೇಶ್ವರಾಚಾರ್ಯರ ಒಟ್ಟು ಕೃತಿಗಳ ಪರಿಶೀಲನೆಗೆ ಈ ಕೆಲವು ಉದಾಹರಣೆಗಳು ಸಾಕೆಂದೆನಿಸುತ್ತದೆ.

## ವಿದೇಶೀಪ್ರಯಾಣ

ಪರಮೇಶ್ವರಾಚಾರ್ಯರಿಗೆ 1981 ರಲ್ಲಿಯೇ ನ್ಯೂಯಾರ್ಕ್‌ನ ಏಷ್ಯನ್ ಉತ್ಸವಕ್ಕೆ ಹೋಗುವ ಅವಕಾಶ ಬಂದಿದ್ದು ಕಾರಣಾಂತರದಿಂದ ಹೋಗಲು ಸಾಧ್ಯವಾಗಲಿಲ್ಲ. ಆದರೆ 1980ರಲ್ಲಿ ಲಕ್ಷ ದ್ವೀಪದಲ್ಲಿ ನಡೆದ ನ್ಯಾಷನಲ್ ವರ್ಕ್‌ಷಾಪ್ ಕಾರ್ಯಾಗಾರದಲ್ಲಿ ಭಾಗವಹಿಸಿದ್ದರು. ಭಾರತೀಯ ಪ್ರವಾಸೋದ್ಯಮ ಇಲಾಖೆಯಿಂದ 1981ರಲ್ಲಿ ಲಂಡನ್, ಸ್ವಿಡ್ಜರ್ ಲ್ಯಾಂಡ್‌ನ ಸಿಯಾನ್, ಮಾರ್ಟಿಗ್ನಿ ಹಾಗೂ ಜಿನಿವಾಗಳಲ್ಲಿ ಮರದ ಕೆತ್ತನೆಯ ಪ್ರಾತ್ಯಕ್ಷಿಕೆಯ ಪ್ರದರ್ಶನಾಲಯಗಳಲ್ಲಿ ಸಕ್ರಿಯವಾಗಿ ಪಾಲುಗೊಂಡರು. ಅಮೆರಿಕದ ಚಿಕಾಗೋ ನಗರದಲ್ಲಿ 1985 ಭಾರತ ಉತ್ಸವ ನಡೆದಿದ್ದು ಅಲ್ಲಿ ತಮ್ಮ ಕಾಷ್ಠ ಶಿಲ್ಪಕಲೆಯನ್ನು ಪ್ರದರ್ಶಿಸಿದ್ದಲ್ಲದೆ, ಭಾರತವನ್ನು ಈ ಉತ್ಸವದಲ್ಲಿ ಮರದ ಕೆತ್ತನೆಯಲ್ಲಿ ಪ್ರತಿನಿಧಿಸಿದ ಉನ್ನತ ಶಿಲ್ಪಿ ಎಂಬ ಹೆಗ್ಗಳಿಕೆಗೂ ಪಾತ್ರರಾದರು. ಇದೇ ಸಂದರ್ಭದಲ್ಲಿ ನ್ಯೂಯಾರ್ಕ್ ವಾಷಿಂಗ್ ಟನ್‌ಗಳಿಗೂ ಹೋಗಿ ಅಲ್ಲಿಯ ಖ್ಯಾತ ಕಲಾ ಪ್ರದರ್ಶನಾಲಯಗಳನ್ನು ಕಂಡು ಬಂದರು.

ದೇಶ ವಿದೇಶಗಳಲ್ಲಿ ತಾವು ಕಂಡು ಬಂದದ್ದರ ಬಗ್ಗೆ ತುಂಬು ಉತ್ಸಾಹದಿಂದ ಆಚಾರ್ಯರು ವರ್ಣಿಸುತ್ತಾರೆ. ಜಿನಿವಾದ ಕಲಾಗ್ರಾಮದ ಬಗ್ಗೆ, ಸಿಡ್ಜರ್ ಲ್ಯಾಂಡ್‌ನಲ್ಲಿ ಸಣ್ಣ ಪುಟ್ಟ ಅಳತೆಯಿಂದ ಹಿಡಿದು ಮನೆಯಷ್ಟು ಬೃಹದಾಕಾರದಲ್ಲಿರುವ ಗಡಿಯಾರಗಳ ಬಗ್ಗೆ ಅವುಗಳಲ್ಲಿ ಅಳವಡಿಸಿರುವ ವರ್ಣಚಿತ್ರಗಳು, ಕಲಾತ್ಮಕತೆಯ ಬಗ್ಗೆ ಎಷ್ಟು ಬಣ್ಣಿಸಿದರೂ ತೃಪ್ತಿಯಿಲ್ಲ. ಅಲ್ಲಿ ಕಲಾವಿದರಿಗೆ ನೀಡುವ ಗೌರವವನ್ನು ಕಂಡು ಬೆರಗಾಗಿದ್ದಾರೆ. ಕಲಾ

ಪ್ರದರ್ಶನವೊಂದನ್ನು ಸುಸಜ್ಜಿತವಾಗಿ ಜೋಡಿಸಿದ್ದ ಸಾಮಾನ್ಯ ಬಡಗಿಯೊಬ್ಬನಿಂದಲೇ ಆ ಪ್ರದರ್ಶನದ ಉದ್ಘಾಟನೆ ನಡೆದಿದ್ದು ಕಂಡು ಅಚ್ಚರಿಗೊಂಡಿದ್ದಾರೆ. ತಾವು ಕೃತಿ ರಚಿಸುತ್ತಿದ್ದಾಗ ಕುತೂಹಲದಿಂದ ಕೇಳಿದ ವಿದೇಶಿ ಜನರ, ಕಲಾವಿದರ ನೂರಾರು ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರ



ವಿದೇಶದಲ್ಲಿ ಪ್ರಾತ್ಯಕ್ಷಿಕೆ

ನೀಡಿದ್ದಾರೆ. ಸಂದೇಹಗಳನ್ನು ಪರಿಹರಿಸಿದ್ದಾರೆ. ಅವರ ಸ್ವಾಭಿಮಾನ, ಸ್ವಚ್ಛತೆ, ಪ್ರಾಮಾಣಿಕತೆಗೆ ತಲೆದೂಗಿದ್ದಾರೆ. ಅಲ್ಲಿ ವ್ಯಕ್ತಿಗಿಂತ ಕೃತಿ ಮುಖ್ಯ ಎಂಬುದನ್ನು ಕಂಡುಕೊಂಡಿದ್ದಾರೆ.

ಪರಮೇಶ್ವರಾಚಾರ್ಯರು ಅಮೆರಿಕೆಯಿಂದ 17.9.1985ರಂದು ಪತ್ರವೊಂದನ್ನು ಬರೆದಿದ್ದು ಅದನ್ನು ಅಂತೆಯೆ ಕೊಡುವುದು ಹೆಚ್ಚು ಸೂಕ್ತ ಎಂದು ಭಾವಿಸುತ್ತೇನೆ.

''ಅಮೆರಿಕಾದ ಚಿಕಾಗೊ ನಗರದ ಮ್ಯೂಜಿಯಂ ಆಫ್ ಸೈನ್ಸ್,

ಇಂಡಸ್ಟ್ರೀಯಲ್ಲಿ ಮರಕೆತ್ತನೆಯ ಪ್ರಾತ್ಯಕ್ಷಕೆ ನೀಡಿದ ಸಂದರ್ಭದಲ್ಲಿ ಅಲ್ಲಿಯ ಜನರ ಅಭಿಪ್ರಾಯ ಮತ್ತು ಮೆಚ್ಚುಗೆಯನ್ನು ಸಂಕ್ಷಿಪ್ತವಾಗಿ ನಿರೂಪಿಸುತ್ತೇನೆ. ತಾರೀಕು 5 ಜೂನ್ 85ರಿಂದ ಪ್ರಾರಂಭವಾಗಿ 2ನೇ ಸೆಪ್ಟಂಬರ್ ವರೆಗೆ ಬೆಳಗ್ಗೆ 9-30 ಘಂಟೆಯಿಂದ ಸಾಯಂಕಾಲ 5-30ರವರೆಗೆ ಎಕ್ಸಿಬಿಷನ್ ನಡೆಯುತ್ತಿತ್ತು. ಪ್ರತಿ ದಿನವೂ ಸಾವಿರಾರು ಜನರು ಬಂದು ಬಿಡುವಿಲ್ಲದೆ ವೀಕ್ಷಿಸುತ್ತಿದ್ದರು. ಅವರಲ್ಲಿ ಕೆಲವರು 5 ರಿಂದ 10 ಸಾರಿ ಬಂದು ನೋಡಿದೆವು ಆದರೂ ನಮಗೆ ತೃಪ್ತಿಯಾಗಲಿಲ್ಲ, ಎಷ್ಟು ಸಾರಿ ನೋಡಿದರೂ ಮತ್ತೆ ನೋಡುವ ಆಶೆಯಾಗುತ್ತದೆ, ಅದ್ಭುತವಾಗಿದೆ ಎಂದು ಹೇಳಿದರು. ಅಲ್ಲದೆ ಭಾರತ ಬಡದೇಶ ಎಂದು ತಿಳಿದಿದ್ದ ನಮಗೆ ಕಲೆ ಮತ್ತು ಸಂಸ್ಕೃತಿಯಲ್ಲಿ ಶ್ರೀಮಂತ ದೇಶವೆಂದು ಇದು ನೋಡಿದ ಮೇಲೆ ಗೊತ್ತಾಯಿತು ಎಂದು ಹೇಳಿ, ಅವರ ಮನಬಂದಂತೆ ಹೊಗಳಿದರು. ಮನಸ್ಸಿಗೆ ನೆಮ್ಮದಿ ತರುವಂತಹ ಕಲೆ ಮತ್ತು ಸಂಸ್ಕೃತಿ ನಮ್ಮಲ್ಲಿ ಕ್ಷೀಣಿಸಿರುವುದು ನಮಗೆ ನಾಚಿಕೆಯಾಗಿದೆ ಎಂದು ಹೇಳಿದರು. ಭಾರತದಲ್ಲಿ ಇನ್ನೂ ಏನೇನಿದೆ ಎಂದು ಕೇಳಿ ತಿಳಿದುಕೊಂಡು ಭಾರತವನ್ನು ಅದರಲ್ಲೂ ಬೆಂಗಳೂರನ್ನು ಬಂದು ನೋಡುವುದಾಗಿ ಹೇಳಿದರು. ವಿಶೇಷವೆಂದರೆ ಇಲ್ಲಿ ಬಂದು ನೆಲಸಿರುವ ಭಾರತೀಯರು ತಾವು ಇಂಥ ಕಲಾ ಸಂಪ್ರದಾಯವನ್ನು ಭಾರತದಲ್ಲಿಯೇ ನೋಡಲಿಲ್ಲವೆಂದ ಮೇಲೆ ನಮ್ಮ ಮಕ್ಕಳು ಹೇಗೆ ನೋಡುತ್ತಾರೆ ಎಂದು ಹೇಳಿದರಲ್ಲದೆ, ಇಲ್ಲಿ ಇದನ್ನು ಏರ್ಪಡಿಸಿದ್ದರಿಂದ ನಾವು ಬಂದು ನೋಡಿ ಈ ಜನರ ಮುಂದೆ ಹೆಮ್ಮೆಯಿಂದ ತಿರುಗುವಂತಾಯಿತು. ನಮ್ಮ ಸರ್ಕಾರಕ್ಕೆ ಧನ್ಯವಾದಗಳನ್ನು ತಿಳಿಸಿ ಎಂದು ಹೇಳಿ ಅನೇಕ ತರದ ಮೆಚ್ಚುಗೆ ವ್ಯಕ್ತ ಪಡಿಸಿದರು. ಈ ಸಂದರ್ಭದಲ್ಲಿ ನಾನು ಎರಡು ಅಡಿ ಎತ್ತರದ ಅರ್ಧನಾರೀಶ್ವರ ಪ್ರತಿಮೆಯನ್ನು ಮಾಡುತ್ತಿದ್ದು ಸ್ತ್ರೀಪುರುಷರ ಸಮಾನಾರ್ಥಭಾವನೆಯ ಸಂಕೇತವಾಗಿ ನಮ್ಮ ದೇವರು ಅವತರಿಸಿ ತೋರಿಸಿದ್ದಾನೆ, ಹಲವಾರು ಪುರಾಣಗಳೂ ವರ್ಣಿಸಿವೆ ಎಂದು ವಿವರಿಸಿ ಹೇಳಿದೆ. ಇದನ್ನು ನೋಡಿ ಆಶ್ಚರ್ಯ ಪಟ್ಟುಕೊಂಡು, ನಾವು ಅಮೆರಿಕನ್ನರು ಇದನ್ನು ಖಂಡಿತ ಒಪ್ಪುತ್ತೇವೆ. ಇದು ನಮಗೆ ಖಂಡಿತ ಮೆಚ್ಚಿಗೆಯಾಗಿದೆ ಎಂದು ಹೇಳಿ ಅವರ ಗಂಡಂದಿರನ್ನು ಅಣಕಿಸುತ್ತಿದ್ದರು. ಅಲ್ಲಿಯ 'ವಾಲೆಂಟರ್ಸ್'

ಬೆಂಗಳೂರು ಸುಂದರವಾದ ನಗರ, ಸುಂದರವಾದ ಕಲೆಯಲ್ಲೂ ಪ್ರಸಿದ್ಧ ಎಂದು ಹೇಳುತ್ತಿದ್ದ ಹಾಗೆ ಚಪ್ಪಾಳೆಗಳು ಸುರುವಾಗುತ್ತಿತ್ತು. ಒಂದೊಂದು ಕಲಾಕೃತಿಯನ್ನೂ ವಿವರಿಸಿ ಕೇಳಿ ತಿಳಿದುಕೊಂಡು ಸಂತೋಷ ಪಡುತ್ತಿದ್ದರು. ಅಲ್ಲಿಯ ಪ್ರಸಿದ್ಧ ವ್ಯಕ್ತಿ 'ವಾಲಿ ಪಿಲಪ್ಸ್' ಅವರ ಭಾವಚಿತ್ರವನ್ನು 'ಎಲ್ಲೊಟೀಕ್' ಮರದಲ್ಲಿ ಮಾಡುತ್ತಿದ್ದು ಅಲ್ಲಿಯ ಜನಕ್ಕೂ ವಿಶೇಷವಾಗಿ ಕಂಡು ಬಂದು ತುಂಬಾ ಹೊಗಳುತ್ತಿದ್ದರು.''

ಎಂದು ಅಲ್ಲಿಯ ವಿದ್ಯಾಮಾನಗಳನ್ನು ಕಣ್ಣಿಗೆ ಕಟ್ಟುವಂತೆ ಪತ್ರದಲ್ಲಿ ಬರೆದಿದ್ದಾರೆ.

**ಪ್ರಶ್ನಾತೀತ**

ಪರಮೇಶ್ವರಾಚಾರ್ಯರು ವ್ಯಾಪಕವಾಗಿ ದೇಶಸುತ್ತಿದ್ದಾರೆ. ಕೋಶ ಓದಿದ್ದಾರೆ. ಹಾಗೆಂದೇ ಅವರಿಗೆ ಶಿಲ್ಪ ಕುರಿತ ಏನೇ ಪ್ರಶ್ನೆ ಕೇಳಲಿ ಸಮರ್ಪಕವಾಗಿ ಉತ್ತರಿಸುತ್ತಾರೆ. ಸಂದೇಹ ನಿವಾರಣೆ ಮಾಡುತ್ತಾರೆ. ಈ ಕ್ಷೇತ್ರಕ್ಕೆ ಬರುವಾಗಲೇ ಒಂದು ಖಚಿತವಾದ ನಿಲುವು ಅವರಿಗಿತ್ತು. ಅಜ್ಜನ ಕಾಲದಲ್ಲೇ ರಾಜರ ರಾಜಧಾನಿಯಲ್ಲೇ ಸಾಂಪ್ರದಾಯಿಕ ಕಲೆ ತನ್ನ ನೆಲೆಯನ್ನು ಕಳೆದುಕೊಂಡಿತ್ತು. ತಂದೆಯವರು ಪಾರಂಪರಿಕ ವೃತ್ತಿ ಬಿಟ್ಟು ಉಪಾಧ್ಯಾಯರಾಗ ಬೇಕಾಯಿತು. ಮುಂದೆ ಜನರ ಅನಾದರಣೆಯಿಂದ ಸೋದರಮಾವ ಬುದ್ಧಿ ಭ್ರಮಣೆಗೆ ಒಳಗಾಗುವಂತಾಯಿತು. ಇಷ್ಟೆಲ್ಲದರ ಮಧ್ಯೆಯೂ ಆಚಾರ್ಯರು ಶಿಲ್ಪಕಲೆಯಲ್ಲೇ ಹೆಸರು, ಹಣ ಕಂಡು ಕೊಳ್ಳುವೆನೆಂದು ತೀರ್ಮಾನಿಸಿದ್ದು ಅವರ ದೂರ ದೃಷ್ಟಿ, ದೃಢ ನಿಶ್ಚಯಗಳ ದ್ಯೋತಕ. ಶಿಲ್ಪದಿಂದಲ್ಲ ಉಪವೃತ್ತಿಯಾದ ಜ್ಯೋತಿಷ್ಯ ಇತ್ಯಾದಿಗಳಿಂದ ತಂದೆಯವರಿಗೆ ವರಮಾನವಿತ್ತು. ಹಾಗಾಗಿ ಶಿಲ್ಪಕಲಿಯಲು ಆಚಾರ್ಯರಿಗೆ ಅಡಚಣೆ ಇರಲಿಲ್ಲ. ತಂದೆಯ ನಿಧನಾನಂತರವೂ ಸೋದರಮಾವಂದಿರ ಪೋಷಣೆ ದೊರೆಯಿತು.

ಜಯಚಾಮರಾಜ ಒಡೆಯರು 1951ರಲ್ಲಿ ಭುವನೇಶ್ವರಿ ಹಾಗೂ

ಕಾಮಕಾಮೇಶ್ವರಿ ದೇವಾಲಯ ಮಾಡಿಸಬೇಕೆಂದಿದ್ದಾಗ ಅದಕ್ಕೆ ಮೀಸಲಿರಿಸಿದ ಮೊತ್ತ ತಲಾ ಏಳುಲಕ್ಷ ರೂಪಾಯಿಗಳು. ಈ ಕುರಿತು ಆಚಾರ್ಯರು "ನಿರ್ಮಾಣಕ್ಕೆ ಅವಶ್ಯವಾದ ಕಲ್ಲು ಹಾಗೂ ಇನ್ನಿತರ ಕಾಮಗಾರಿ ವೆಚ್ಚಸೇರಿ ಆ ಏಳು ಲಕ್ಷ ! ಶಿಲ್ಪಿಗಳಿಗೆ ಸಿಗುತ್ತಿದ್ದ ದಿನಗೂಲಿ ಎಷ್ಟು ಗೊತ್ತೆ? ಮೂರೋ ನಾಲ್ಕೊ ರೂಪಾಯಿ!! ತರಕಾರಿ ಮಾರುವವನ ಅಂದಿನ ದಿನದ ಆದಾಯ ಶಿಲ್ಪಿಗಳ ಕೂಲಿಗಿಂತ ಎಷ್ಟೋ ಪಾಲು ಹೆಚ್ಚಾಗಿರುತ್ತಿತ್ತು. ಬೇಲೂರು, ಹಳೆ ಬೀಡು ಮುಂತಾದ ಕಡೆಗಳಲ್ಲಿ ಶಿಲ್ಪದ ಬಗ್ಗೆ ಅಧ್ಯಯನ ನಡೆಸುವ ಸಲುವಾಗಿ ತಮ್ಮ ಸ್ವಂತ ಖರ್ಚಿನಲ್ಲೇ ಶಿಲ್ಪಿಗಳು ಹೋಗಿ ಬಂದದ್ದು ಉಂಟು. ಮನೆಯವರ ದುಡಿಮೆಯಲ್ಲಿ ಅರಮನೆಯ ಕೆಲಸ ಮಾಡಿದ್ದುಂಟು" ಎಂದು ನೊಂದು ನುಡಿಯುತ್ತಾರೆ (ಸುಧಾ 1996) "ಹಾಗಾದರೆ ಅರಮನೆಯಿಂದ ಕಲೆಗೆ ಪ್ರೊತ್ಸಾಹವಿರಲಿಲ್ಲವೇ?"ಎಂದು ಆಕಾಶವಾಣಿಯ ಸಂದರ್ಶನದಲ್ಲಿ ಕೇಳಿದಾಗ "ಕಲೆಗೆ, ಕಲಾಭಿವೃದ್ಧಿಗೆ ಪ್ರೋತ್ಸಾಹ ಸಿಕ್ಕಿತು, ಸ್ಥಾನಮಾನ ಸಿಕ್ಕಿತು... ಆದರೆ ಕಲಾವಿದರಿಗೆ ಆರ್ಥಿಕ ಅಭಿವೃದ್ಧಿ ಖಂಡಿತ ಇರಲಿಲ್ಲ" ಎಂದು ಯಾವುದೇ ಅಳುಕಿಲ್ಲದೆ ಆಚಾರ್ಯರು ಹೇಳುತ್ತಾರೆ.

ಹಾಗಿದ್ದಲ್ಲಿ ಭುವನೇಶ್ವರಿ, ಕಾಮಕಾಮೇಶ್ವರಿ ದೇವಾಲಯ ಕೈಗೊಂಡಿದ್ದೇಕೆ? ಎಂದರೆ ಅದಕ್ಕೂ ಉತ್ತರವಿದೆ. ಹೊಯ್ಸಳ ವಿಜಯನಗರದ ನಂತರ ಹೊರ ಹಾಗೂ ಒಳ ಭಿತ್ತಿಗಳೂ ಸೇರಿದಂತೆ ಕಂಬ, ಪ್ರವೇಶದ್ವಾರ ಇತ್ಯಾದಿಗಳೆಲ್ಲವೂ ಶಿಲ್ಪಮಯವಾಗಿ ಶಿಲೆಯಿಂದಲೇ ರೂಪಿಸುವ ಪದ್ಧತಿ ಅಳಿದು ಹೋಗಿತ್ತು. ಆದರೆ ಪರಂಪರಾನುಗತ ಶಿಲ್ಪಿಗಳೂ ಇದ್ದರು, ಶಿಲ್ಪವೂ ಇತ್ತು. ತಮ್ಮ ಒಂದು ಕಲೆಯನ್ನು ಜಗತ್ತಿಗೆ ತೋರ್ಪಡಿಸಲೆಂದು ಅಂದಿನ ಮಹಾರಾಜ ಜಯಚಾಮರಾಜ ಒಡೆಯರಿಗೂ, ಅವರ ಹೆಸರು ಅಜರಾಮರವಾಗಿರುತ್ತದೆ ಎಂದು ಒಪ್ಪಿಸಿ ಸಿದ್ಧಲಿಂಗಸ್ವಾಮಿಯವರು ಕಾರ್ಯಗತರಾದರು. ಅವರೂ ಸೇರಿದಂತೆ ಅವರ ಪುತ್ರ ನಾಗೇಂದ್ರ ಸ್ಥಪತಿಗಳು ಹಾಗೂ ಪರಮೇಶ್ವರಾ ಚಾರ್ಯರಂತಹ ಇನ್ನು ಹಲವಾರು ಕಲಾವಿದರು ಕೇವಲ ಹೆಸರಿಗಾಗಿ ಹಾಗೂ ತಮ್ಮ ಕಲಾಕೃತಿ ನೂರ್ಕಾಲ ಉಳಿಯುತ್ತದೆ ಎಂಬ ಹಂಬಲದಿಂದ ಈ ಕಾರ್ಯ ಒಪ್ಪಿ ಪೂರೈಸಿಕೊಟ್ಟರು. ದೇವಾಲಯ ನೋಡಿದವರೆಲ್ಲ ಇಂದಿಗೂ ಈ

ಬಗೆಯಲ್ಲಿ ರಚಿಸುವ ಶಿಲ್ಪಿಗಳು ಇರುವರೇ ಎಂದು ಆಶ್ಚರ್ಯ ಪಡುವಂತಾಯಿತು.

## ರಾಜಧಾನಿಗೆ

ಈ ದೇವಾಲಯ ನಿರ್ಮಾಣದಿಂದ ಪರಮೇಶ್ವರಾಚಾರ್ಯರಿಗೆ ಆದ ಅನುಕೂಲ ಹಲವಾರು. ಶಿಲಾಶಿಲ್ಪ ರಚನೆಯ ಹಲವಾರು ಮಗ್ಗಲುಗಳನ್ನು ಯಶಸ್ವಿಯಾಗಿ ಕಲಿಯುವಂತಾಯಿತು. ನಾಗೇಂದ್ರ ಸ್ಥಪತಿಗಳಂತಹ ಪೋಷಕರು ದೊರೆತು ಅವರ ಮೂಲಕ ವಿಧಾನಸೌಧದ ನಿರ್ಮಾಣ ಕಾರ್ಯಕ್ಕೆ ಬರುವಂತಾಯಿತು. ಶಿಲ್ಪರಚನೆಯನ್ನೇ ತಮ್ಮ ಮುಂದಿನ ಕಾಯಕವಾಗಿ ಸ್ವೀಕರಿಸಿ, ಬದುಕಿನ ಹಾದಿ ಹಿಡಿಯುವಂತಾಯಿತು. ಆಚಾರ್ಯರು ಬೆಂಗಳೂರಿಗೆ ಬಂದದ್ದು ಇಲ್ಲಿಯೇ ನೆಲಸುವಂತಾಗಿದ್ದು ಎಂ.ಡಿ.ರಿತಿ ಅವರು ಗುರುತಿಸಿರುವಂತೆ ಮೈಸೂರು ಶಿಲ್ಪ ಸಂಪ್ರದಾಯ ಬೆಂಗಳೂರಿಗೆ ಬರುವಂತಾಯಿತು. "one could say that he (Prameswaracharya) was primarily responsible for bringing the Mysore style of sculpture to Bangalore" (Times of India 22.6.88)

ವಿಧಾನ ಸೌಧದ ನಿರ್ಮಾಣದಲ್ಲೂ ಆಚಾರ್ಯರಿಗೆ ಹೇಳಿಕೊಳ್ಳುವಂತಹ ಸಂಭಾವನೆ ಬರಲಿಲ್ಲ. ಬದಲಿಗೆ ಗಾರೆಯ ಶಿಲ್ಪ ರಚನೆಯ ಪದ್ಧತಿ ಕಂಡುಕೊಂಡರು. ಇವರು ಸ್ವತಃ ಗಾರೆ ಕೆಲಸ ಮಾಡಲಿಲ್ಲ. ಇವರ ಅಣ್ಣಂದಿರಾದ ಸದಾನಂದಾಚಾರ್, ಶಿವನಂಜಪ್ಪ, ಸೋದರಮಾವ ಮತ್ತು ಶಂಕರ (ಶಿವಶಂಕರಾಚಾರ್) ಮೈಸೂರಿನ (ಸುಧಾ) ಗಾರೆ ಶಿಲ್ಪಿಗಳು ಭಾಗ ವಹಿಸಿದ್ದರು. ಆದರೆ ಡಿಸೈನ್‌ಗಳು ಇವರವು. ಹನುಮಂತಯ್ಯ ಅವರ ನಿರೀಕ್ಷೆಯ ಮಟ್ಟ ಮುಟ್ಟಲಿಲ್ಲ. ಅವರು ಅಂದುಕೊಂಡಂತೆ ವಿಧಾನ ಸೌಧ ಇನ್ನು ವಿಶಾಲವಾಗಿ ಚಿತ್ರ ಶಿಲ್ಪ ಮಯವಾಗಿ ರೂಪುಗೊಳ್ಳಲಿಲ್ಲವಾದರೂ ಆಚಾರ್ಯರು ''ವಿಧಾನಸೌಧ ಕಂಡಾಗಲೆಲ್ಲ ಈ ಬೃಹತ್ ನಿರ್ಮಾಣದಲ್ಲಿ ನನ್ನದೂ ಒಂದು ಪಾತ್ರ ಇದೆ ಎಂಬ ಹೆಮ್ಮೆ ನನಗಾಗುತ್ತದೆ'' ಎನ್ನುತ್ತಾರೆ. ಈ ಅದೃಷ್ಟ ಎಷ್ಟು ಮಂದಿ ಕಲಾವಿದರಿಗೆ ಲಭ್ಯ!?

ಡಿಸೈನ್ ಸೆಂಟರ್‌ಗೆ ಸೇರಿದ್ದು ಆಚಾರ್ಯರ ಭಾಗ್ಯದ ಬಾಗಿಲು ತೆರೆದಂತಾಯಿತು. ವಿನ್ಯಾಸ ಕೇಂದ್ರಕ್ಕೂ ಆಚಾರ್ಯರಂಥವರು ದೊರೆತದ್ದು ಅದರ ಮೂಲ ಉದ್ದೇಶ ಸಫಲವಾಗುವಂತಾಯಿತು . ಕಮಲಾದೇವಿ ಅವರೂ ಆಚಾರ್ಯರಿಗೆ ಬೆನ್ನೆಲುಬಾಗಿ ನಿಂತು ಸಾಕಷ್ಟು ಪ್ರೋತ್ಸಾಹ ನೀಡಿದರು. ಇಲ್ಲಿ ಕೆಲಸಕ್ಕೆ ಸೇರಿದ ಹತ್ತು ವರ್ಷಗಳಲ್ಲೇ ಆಚಾರ್ಯರಿಗೆ ಪ್ರತಿಷ್ಠಿತ ರಾಷ್ಟ್ರ ಪ್ರಶಸ್ತಿ ಅದು ಸ್ಥಾಪಿಸಿದ ಪ್ರಥಮ ವರ್ಷವೇ ಬರುವಂತಾಯಿತು. ಆ ವರ್ಷವೇ ಸ್ವತಃ ಕಮಲಾದೇವಿ ಅವರ ನೇತೃತ್ವದಲ್ಲಿ ಮೆಕ್ಕೆಕಟ್ಟೆಯ 'ಉರು'ಗಳ ಪ್ರತಿಕೃತಿ ಮಾಡುವಂತಾಯಿತು. 1980ರಲ್ಲಿ ಅಖಿಲ ಏಷ್ಯಾ ಕಲಾವಿದರ ಕಾರ್ಯಾಗಾರದಲ್ಲಿ ಪಾಲುದೊರೆಯಿತು. ರಾಷ್ಟ್ರಾದ್ಯಂತ ಹಲವಾರು ಸ್ಥಳಗಳ ಕಾರ್ಯಾಗಾರ, ಶಿಬಿರ ಪ್ರಾತ್ಯಕ್ಷಿಕೆಗಳಲ್ಲಿ ಪಾಲುಗೊಳ್ಳುವಂತಾಯಿತು. ಒಮ್ಮೆ ಅಮೆರಿಕೆಗೆ, ಒಮ್ಮೆ ಯೂರೋಪು ದೇಶಗಳಿಗೆ ಪ್ರವಾಸ ಹೋಗಿ ಪ್ರಾತ್ಯಕ್ಷಿಕೆ ನೀಡುವಂತಾಯಿತು. ಈ ಬಗ್ಗೆ ಆಚಾರ್ಯರಿಗೆ ಕೃತಜ್ಞತಾ ಪೂರ್ವಕ ಧನ್ಯವಾದಗಳಿವೆ. ಕಮಲಾದೇವಿ ಅವರ ಬಗ್ಗೆ ಮಾತಾಡುವಾಗ ಕಣ್ಣುಗಳು ಮಿನುಗುತ್ತವೆ. ನಶಿಸುತ್ತಿದ್ದ ಈ ಸಾಂಪ್ರದಾಯಿಕ ಕಲೆ ಅವರಿಂದಾಗಿ ಮತ್ತೆ ತಲೆ ಎತ್ತುವಂತಾಯಿತು. ಇನ್ನಿಲ್ಲದಂತಿದ್ದ ಕಲಾವಿದರು ಬಹಳಷ್ಟು ಜನ ತಮ್ಮ ಜೀವನೋಪಾಯ ಕಂಡುಕೊಳ್ಳುವಂತಾಯಿತು. ದೇಶೀಯ ಶ್ರೀಮಂತರ ಹಾಗೂ ವಿದೇಶಿಯರಿಂದ ಈ ಕೃತಿಗಳಿಗೆ ಅಪಾರ ಬೇಡಿಕೆ ಬರುವಂತಾಯಿತು. ಎನ್ನುತ್ತಾರೆ. ''...ಇಂದು ಸ್ಥಿತಿ ಬದಲಾಯಿಸಿದೆ. ಅಂತಹ ಶ್ರೇಷ್ಠ ಶಿಲ್ಪಿಯು ಮಾಡಿದ ಕೃತಿಗಳಿಗೆ ಗಿರಾಕಿಯಿದೆ. ಆದರದಿಂದ ಕೊಳ್ಳುವರಿದ್ದಾರೆ. ಸ್ವಾತಂತ್ರ್ಯಾ ನಂತರ ಇದು ಇನ್ನೂ ಹೆಚ್ಚುತ್ತಿದೆ. ವಿದೇಶಗಳಿಂದಂತೂ ವಿಪರೀತ ಬೇಡಿಕೆಯಿದೆ. ಕೊಳ್ಳುವವರ ಅವಶ್ಯಕತೆಯನ್ನು ಪೂರೈಸುವ ಪ್ರಮಾಣದಲ್ಲಿ ಕೃತಿಗಳನ್ನು ಮಾಡಲು ಸಾಧ್ಯವಾಗುತ್ತಿಲ್ಲ'' ಎಂಬ ಆಶಾವಾದ ಉಳ್ಳ ಆಚಾರ್ಯರು ಕೃತಿಗಳ ಗುಣ ಮಟ್ಟದ ಬಗ್ಗೆಯೂ ತೀವ್ರ ಆತಂಕ ವ್ಯಕ್ತಪಡಿಸುತ್ತಾರೆ. ''ಸಂಖ್ಯೆ ಹೆಚ್ಚಿದಂತೆ ಗುಣ ಕಡಿಮೆಯಾಗುವ ಸಂಭವವಿದೆ. ಗಟ್ಟಿಯೋ ಜೊಳ್ಳೊ ಕೊಟ್ಟು ವಿದೇಶದಿಂದ ಹಣಸಂಪಾದಿಸಬಹುದು. ಆದರೆ ಕಳಪೆ ಸಾಮಗ್ರಿ ಕೊಟ್ಟು ಒಮ್ಮೆ

ಗೌರವ ಕಳೆದುಕೊಂಡರೆ ಪುನಃ ಸಂಪಾದಿಸಲಾಗುವುದಿಲ್ಲ. ಆದುದರಿಂದ ಕೃತಿಯ ಮಟ್ಟಕ್ಕೂ ಮೊದಲು ಗಮನ ಕೊಡಬೇಕು. ಹಾಗೆಯೇ ಅವುಗಳನ್ನು ರಚಿಸಲು ಸಾಮರ್ಥ್ಯಬರುವಂತೆ ಉತ್ತಮ ಶಿಕ್ಷಣವನ್ನೂ ಕೊಡಬೇಕು'' ಎಂದು ಹೇಳುತ್ತಾರೆ (ಸುಧಾ 1971).

## ಶಿಲ್ಪೋಜ

ಸಂಪ್ರದಾಯ ಶಿಲ್ಪಕಲೆಗೆ ಸೂಕ್ತ ಶಿಕ್ಷಣದ ಅವಶ್ಯಕತೆಯ ಬಗ್ಗೆ ಆಚಾರ್ಯರಿಗೆ ಮೊದಲಿನಿಂದಲೂ ಅರಿವಿದೆ. ಸ್ವತಃ ಶಿಲ್ಪ ಮನೆತನದವರೇ ಆದರೂ ಕ್ರಮಬದ್ಧವಾಗಿ, ಮೂಲದಿಂದ ತಿಳಿಯಬೇಕೆಂದೇ ಚಾಮರಾಜೇಂದ್ರ ತಾಂತ್ರಿಕಶಾಲೆ ಹಾಗೂ ಶ್ರೀ ಸಿದ್ಧಲಿಂಗ ಸ್ವಾಮಿಗಳ ಬಳಿ ಕಲಿಯ ಬಯಸಿದರು. ಕರ್ನಾಟಕದಲ್ಲಿ ಶಾಸ್ತ್ರೀಯ ಶಿಲ್ಪಕಲಾ ತರಬೇತಿ ಶಾಲೆ ಸ್ಥಾಪನೆಯಾಗುವ ಅಗತ್ಯವನ್ನು ಒತ್ತಿ ಹೇಳುವ ಆಚಾರ್ಯರು ''ಮದ್ರಾಸು, ಆಂಧ್ರ ಮುಂತಾದ ನೆರೆ ರಾಜ್ಯಗಳಲ್ಲಿ ಶಾಸ್ತ್ರೀಯ ತರಬೇತಿ ಶಾಲೆ ಇರುವಾಗ ನಮ್ಮ ರಾಜ್ಯದಲ್ಲಿ ಯಾಕೆ ಸ್ಥಾಪಿಸಬಾರದು''ಎಂಬುದು ಅವರ ಪ್ರಶ್ನೆ (ಸುಧಾ 1996)

ಪರಮೇಶ್ವರಾಚಾರ್ಯರ ಈ ಕಳಕಳಿಗೆ ಕಾರಣವಿದೆ. ದೇಶವಿದೇಶಗಳಲ್ಲಿ ನಮ್ಮ ಸಾಂಪ್ರದಾಯಿಕ ಶಿಲ್ಪಗಳಿಗೆ ಬೇಡಿಕೆ ಹೆಚ್ಚುತ್ತಿರುವುದರಿಂದ, ಅನನುಭವಿಗಳು ಈ ಕ್ಷೇತ್ರಕ್ಕೆ ಬಂದು ಕೆಳದರ್ಜೆಯ ಕೃತಿಗಳನ್ನು ಮಾಡಿದಲ್ಲಿ ಸ್ವತಃ ಅವರೂ ಅವಹೇಳನಕ್ಕೆ ಗುರಿಯಾಗುವರಲ್ಲದೆ ನಿಜವಾದ ಶಿಲ್ಪಿಗೂ ತೊಂದರೆಯಾಗುತ್ತದೆ. ಅಲ್ಲದೆ ಸಂಪ್ರದಾಯ ಕಲೆ ಕಲಿಯುವಿಕೆಯಲ್ಲಿ ಕಷ್ಟವಿದೆ. ಮುಖ್ಯವಾಗಿ ಕಲಿಯಬೇಕಾದುದು ಧ್ಯಾನಶ್ಲೋಕಗಳು, ತಾಳಮಾನಗಳು. ವಿಗ್ರಹ ಪ್ರತಿಷ್ಠಾಪನೆಯೂ ಮಾಡುವುದಿದ್ದಲ್ಲಿ ವಾಸ್ತುಜ್ಞಾನ, ಆಗಮಗಳೂ ತಿಳಿದಿರಬೇಕು. ನಂತರ ತಾಂತ್ರಿಕ (Technic) ವಿಷಯಗಳು ಶಿಲೆ ಅಥವ ಮರದ ವೈವಿಧ್ಯಗಳು, ಪ್ರಕಾರಗಳು, ಕೆತ್ತಲು ಇರುವ ವಿವಿಧ ಉಪಕರಣಗಳು ನಂತರ ನೀಡುವ ಅಂತಿಮ ಪರಿಷ್ಕಾರಗಳ ಬಗ್ಗೆ ಆಳವಾದ ಅರಿವು, ಪ್ರಯೋಗಾನುಭವ (practical knowledge) ಮುಖ್ಯವಾದುದು. ಲೋಹ ಶಿಲ್ಪ ಇನ್ನೂ



ಕಲಾಶಿಬಿರದಲ್ಲಿ ಆಚಾರ್ಯರು

ಕಷ್ಟಕರವಾದುದು. ಒಂದು ಹದದಲ್ಲಿ, ಪಾಕದಲ್ಲಿ ಲೋಹವನ್ನು ಕರಗಿಸಿ ಹೊಯ್ಯಬೇಕು ಇದು ತೀರ ಅನುಭವ ಸಿದ್ಧವಾದುದು. ಗ್ರಂಥಗಳ ಬಾಯಿ ಪಾಠದಿಂದ ಆಗುವಂಥಹದಲ್ಲ.

ಸಂಪ್ರದಾಯ ಶಿಲ್ಪಗಳು ಸಾಮಾನ್ಯರಿಗೂ ಅರ್ಥವಾಗುತ್ತವೆ ಗ್ರಾಹ್ಯ ವಾಗುತ್ತವೆ. ಒಂದು ವಿಧದ ಆನಂದ ನೀಡುತ್ತವೆ ಎಂಬುದೇ ಅವರ ಅಭಿಪ್ರಾಯ ''ಪುರಾತನ ಪಲ್ಲವ, ಚೋಳ, ಹೊಯ್ಸಳ ಶಿಲ್ಪಗಳನ್ನು ನೋಡಿದಷ್ಟು ನನಗೆ ಸಂತೋಷವಾಗುತ್ತದೆ. ಅವುಗಳಲ್ಲಿ ಪಲ್ಲವ ಶಿಲ್ಪವೆಂದರೆ ಬಹು ಇಷ್ಟ. ಅವುಗಳಲ್ಲಿ ಏನೋ ಅಲೌಕಿಕ ಆನಂದ ಉಂಟಾಗುತ್ತದೆ.'' ಎನ್ನುತ್ತಾರೆ. (ಸುಧಾ 1971) ಎಂದೇ ಅವರ ಶಿಲ್ಪಗಳು ಹೆಚ್ಚಿಗೆ ಚೋಳ, ಪಲ್ಲವ, ಹೊಯ್ಸಳ ಶೈಲಿಯಲ್ಲಿರುವುದನ್ನು ಗುರುತಿಸಬಹುದು.

ಶಿಲ್ಪಕಲೆ ಕಲಿಯಬೇಕೆಂದು ಬಯಸುವವರಿಗೆ ಆಚಾರ್ಯರು ಮುಕ್ತವಾಗಿ ತಾವು ಕಲಿತಿದ್ದನ್ನು ಧಾರೆ ಎರೆಯುತ್ತಾರೆ. ಪ್ರಾತ್ಯಕ್ಷಿಕೆಯ ಅನುಭವ ಒಂದಾದರೆ

ಬಳಸುವ ಮಾಧ್ಯಮದ ಗುಣಧರ್ಮದ ಅರಿವು ಇನ್ನೊಂದು. ಆ ಬಗ್ಗೆ ಕೇಳಿದರೆ ''ಮರದಂತೆ ಶಿಲೆಯಿಲ್ಲ. ಶಿಲೆಯಲ್ಲಿಯೂ ಕೃಷ್ಣ ಶಿಲೆಯಂತೆ ಗ್ರಾನೆಟ್ ಶಿಲೆಯಿಲ್ಲ. ಇವೆರಡಕ್ಕಿಂತ ಅಮೃತಶಿಲೆ ಇನ್ನು ನವೀನ. ಒಂದರಲ್ಲಿ ಕೆಲಸ ಮಾಡುವ ವಿಧಾನ ಇನ್ನೊಂದಕ್ಕೆ ಆಗುವುದಿಲ್ಲ. ಒಂದು ಶಿಲೆಗೆ ಕೊಡುವ ಉಳಿ ಏಟು ಇನ್ನೊಂದಕ್ಕೆ ಹೆಚ್ಚಾಗಬಹುದು... ಶಿಲೆಯಲ್ಲಿ ರಚಿಸುವುದಕ್ಕೂ ಮರದಲ್ಲಿ ರಚಿಸುವುದಕ್ಕೂ ವ್ಯತ್ಯಾಸಗಳಿವೆ. ಆದರೆ ಶಿಲ್ಪಿಯ ಸಾಧನೆಯಿಂದ ಅನುಭವದಿಂದ ಮೂರ್ತಿಗಳ ರೂಪತರುವುದು ಅಷ್ಟು ಕಷ್ಟ ಎನಿಸದು. ಆದರೂ ನಿಮಗೆ ಯಾವುದು ಸುಲಭ ಸರಳ ವೆನಿಸುತ್ತದೆಯೋ ಅದು ನೀವು ತಿಳಿದಷ್ಟು ಸುಲಭವಲ್ಲ. ಅಮೃತ ಶಿಲೆಯ ಕೃತಿ ರಚನೆಯಲ್ಲಿ ಸೂಜಿಯಂತಹ ಉಳಿಗಳ ಮೇಲೆ ಮೆದುವಾದ ಸುತ್ತಿಗೆ ಪೆಟ್ಟು ಬೀಳಬೇಕು ಎಂದರೆ ಮಾತ್ರ ಸೂಕ್ಷ್ಮ ಕಲೆ ತರಲು ಸಾಧ್ಯವಾಗುತ್ತದೆ ಎನ್ನುತ್ತಾರೆ ಆಚಾರ್ಯರು. (ಶಿಲ್ಪಿಸಂಕುಲ 100) (ಸುಧಾ 1971).

ಕಲಿಕೆಯಲ್ಲಿ ಬರುವ ಇನ್ನೊಂದು ಸಂಗತಿಯೆಂದರೆ 'ಶಿಲ್ಪಸಂಕರ'. ಸ್ವಾತಂತ್ರ್ಯದ ಆಜು ಬಾಜುವಿನಲ್ಲಿ ಸಾಂಪ್ರದಾಯಿಕ ಮನೆತನದವರಲ್ಲದ ಆದರೆ ಕಲೆಯ ಬಗ್ಗೆ ಒಲವಿದ್ದ ಅನೇಕರು ಚಿತ್ರ, ಶಿಲ್ಪ ಕ್ಷೇತ್ರವನ್ನು ಪ್ರವೇಶಿಸಿದ್ದು. ಇದಕ್ಕೆ ಕಾರಣವನ್ನು ಬೇರೊಂದೆಡೆ ಗುರುತಿಸಿರುವಂತೆ (ಸಂಯೋಜನೆ) ಅನ್ಯ ಶಾಲೆಯವರಿಗೆ (ವಿಶೇಷವಾಗಿ ಮೇಲ್ಜಾತಿಯವರಿಗೆ) ತಾವು ಕಲಿತ ವಿದ್ಯೆಯಿಂದ ಜೀವನ ನಿರ್ವಹಣೆ ಅಸಾಧ್ಯವೆನಿಸಿತ್ತು. ಯಾರು ಬೇಕಾದರೂ ಚಿತ್ರ ಶಿಲ್ಪ ಕಲಿಯಬಹುದೆಂಬ ಧೋರಣೆಯಿಂದ ಇವುಗಳಿಗೇ ಮೀಸಲಾದ ಹಲವಾರು ಶಾಲಾ ಕಾಲೇಜುಗಳು ರಾಷ್ಟ್ರಾದ್ಯಂತ ಹುಟ್ಟಿಕೊಂಡವು. ಇಲ್ಲಿ ಕಲಿತು ಬಂದವರಿಂದಾಗಿ ಸಂಪ್ರದಾಯ ಕಲೆಯ ಶುದ್ಧತೆ ಮಾಯವಾಗಿ ಹಲವಾರು ಶೈಲಿಯ ಮಿಶ್ರಣ ಒಂದೇ ಕೃತಿಯಲ್ಲಿ ಕಂಡುಬರುವಂತಾಯಿತು. ಇದಕ್ಕಿಂತ ಚಿತ್ರ, ಶಿಲ್ಪಗಳು ಒಂದು ಪೂಜೆ, ಪವಿತ್ರತೆ ಎಂದು ತಿಳಿದಿದ್ದ ಸಂಪ್ರದಾಯ ಕಲಾವಿದರಿಗೆ ಈ ಹೊಸ ಪೀಳಿಗೆಯ ಕಲಾವಿದರು ಮದಿರಾಪಾನ ಮಾಡಿ ಒಂದು ಕೈಲಿ ಧೂಮಪಾನ ಮಾಡುತ್ತಾ ಇನ್ನೊಂದು ಕೈಯಲ್ಲಿ ಚಿತ್ರ ಶಿಲ್ಪ

ರಚಿಸುತ್ತಿದ್ದ ನಿಯಮರಾಹಿತ್ಯ ತೀವ್ರವಾಗಿ ಮಾನಸಿಕ ಆಘಾತ ನೀಡಿತು. ಈ ಕಾರಣಗಳಿಂದ ಕೃತಿರಚನೆಯಲ್ಲಿ ಶುದ್ಧತೆ ಹಾಗೂ ಪಾವಿತ್ರತೆ ಉಳಿಸಲು ತಮ್ಮದೇ ಪ್ರತ್ಯೇಕ ಗುರುಕುಲಮಾದರಿಯ ಶಾಲೆಯ ಅವಶ್ಯಕತೆಯಿತ್ತು.

**ಕಲಾಶುದ್ಧತೆ**

ಅಸಾಂಪ್ರದಾಯಿಕ ಕಲಾವಿದರು ಹೊಸತೊಂದು ಕೃತಿ ನಿರ್ಮಿಸುವಲ್ಲಿ ಪರಿಣಿತಿ ಪಡೆದಿರಲಿಲ್ಲವಾದರೂ ಹಳೆಯ ಶಿಲ್ಪಗಳನ್ನು ತದ್ವತ್ತಾಗಿ ಅನುಸರಿಸಲು ಸಾಧ್ಯವಿತ್ತು. (ಹೊಸ ಕೃತಿಗಳಿಗೆ ತಾಳಮಾನ ಇತ್ಯಾದಿಗಳ ಪರಿಚಯ ಅಥವ ನಕ್ಷೆ - skitch- ಇರಲಿಲ್ಲ) ಈ ಅನುಕರಣೆಯೂ ಅನೇಕ ಸಲ ವಿಚಾರ ಹೀನವಾಗಿತ್ತು. ಐರಾವತಕ್ಕೂ ಅಡಿ ತಪ್ಪಿರಬಹುದು. ಹಿಂದಿನ ಪ್ರಾಚಾರ್ಯರೂ ತಪ್ಪು ಮಾಡಿರಬಹುದು. ಅವುಗಳ ಅಂಧಾನುಕರಣೆಯಿಂದ ಅವೇ ನಿಜವಾದ ಕೃತಿಗಳೆಂಬಂತೆ ತಪ್ಪು ತಿಳಿಯುವ ಸಾಧ್ಯತೆಯಿತ್ತು. ಆಚಾರ್ಯರಂತಹ ಕಲಾವಿದರಿಗೆ ಹಳೆಯ ಕೃತಿಗಳನ್ನು ಅವು ಇರುವಂತೆಯೇ ನಕಲು ಮಾಡುವ ಮನೋಭಾವ ಇರಲಿಲ್ಲ. ಹಳೆಯ ಕೃತಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸುವ ಅಗತ್ಯವೂ ಇತ್ತು. "Even the masters of old could have made mistakes. Their instruments might have slipped or the stone could have been imperfect. I believe that one must use one's judjement and make changes when copying the old pieces, not just imitate them exactly". (M. D. Riti. 1988) ಎಂದು ಪತ್ರಿಕಾ ಸಂದರ್ಶನದಲ್ಲಿ ಆಚಾರ್ಯರೇ ಹೇಳಿರುವಂತೆ ಕಲೆಯ ಪರಿಶುದ್ಧತೆಯ ಕಡೆಗೆ ಆದ್ಯಗಮನ ನೀಡುವಂತಾಯಿತು.

ಇನ್ನೊಂದು ಅಂಶವೆಂದರೆ ಮಧ್ಯವರ್ತಿಗಳ ನಿವಾರಣೆ. ರಾಜರ ಕಾಲಕ್ಕಿಂತ ಇಂದು ಆರ್ಥಿಕ ಪರಿಸ್ಥಿತಿ ಕಲಾವಿದರಿಗೆ ಸುಧಾರಿಸಿದೆ ಎಂದು ಒಪ್ಪುವ ಆಚಾರ್ಯರು ಮಧ್ಯವರ್ತಿಗಳ ಬಗ್ಗೆ ದೂರದರ್ಶನ ಸಂದರ್ಶನವೊಂದರಲ್ಲಿ ಅಸಮಾಧಾನ ತೋರಿದ್ದಾರೆ. ಕಲಾವಿದರಿಂದ ಕಡಿಮೆ ಮೊತ್ತಕ್ಕೆ ಕೃತಿಗಳನ್ನು ಪಡೆದು ದೇಶ ವಿದೇಶಗಳಲ್ಲಿ ಅಧಿಕ ಮೊತ್ತಕ್ಕೆ ಮಾರಾಟಮಾಡುವ

ಮಧ್ಯವರ್ತಿಗಳಿಂದಾಗಿ ಕಲಾವಿದರು ಸಾಕಷ್ಟು ಶೋಷಣೆಗೆ ಒಳಗಾಗಿರುವುದು ತಿಳಿದ ಸಂಗತಿಯೇ ಆಗಿದೆ. ಒಂದು ಗುರುಕುಲಾಶ್ರಮದಲ್ಲಿ ಗುರು ಹಾಗೂ ಶಿಷ್ಯರು ಒಟ್ಟಾಗಿ ಕೆಲಸಮಾಡುತ್ತಿದ್ದು ಅದು ಶಾಲೆಗಿಂತ ವಿಶಾಲ ಅರ್ಥದಲ್ಲಿ ಪರಂಪರೆ, ಶೈಲಿ (ಇಂಗ್ಲೀಷ್‌ನಲ್ಲಿ 'School') ಎಂಬಂತೆ ಇದ್ದಲ್ಲಿ ಗ್ರಾಹಕರು ನೇರವಾಗಿ ಇಲ್ಲಿಗೇ ಬಂದು ಬೇಡಿಕೆಯನ್ನು ಸಲ್ಲಿಸಿ ಕೃತಿಗಳನ್ನು ಪಡೆಯಬಹುದು. ಇದರಿಂದಾಗಿ ಮಧ್ಯವರ್ತಿಗಳ ಅವಶ್ಯಕತೆ ತಪ್ಪುತ್ತದೆ.



ನರ್ತಕಿಯ ಶಿಲ್ಪ

## ಕಲಾಪ್ರವಾಹದಲ್ಲಿ

ಇಷ್ಟೆಲ್ಲ ಹಿನ್ನೆಲೆಯಲ್ಲಿ ಆಚಾರ್ಯರಿಗೆ ಆಧುನಿಕ ಶಿಲ್ಪ ಕಲೆಯ ಬಗ್ಗೆ ಇರುವ ಅಭಿಪ್ರಾಯ ಸ್ವಾಗತಿಸುವಂತಹದು. ಈಗಿನ ಸಮಕಾಲೀನ ಕಲೆ ಬಗ್ಗೆ ನಿಮ್ಮ ಅನಿಸಿಕೆ ಏನು? ಎಂದು ಪಿ. ಆರ್. ತಿಪ್ಪೇಸ್ವಾಮಿ ಅವರು ಪ್ರಶ್ನಿಸಿದಾಗ

‘‘ಅದು ನನಗೆ ಇಷ್ಟವಾಗುತ್ತದೆ. ಆ ಕಲೆ ಹಿಂದಿನಿಂದಲೂ ಇದ್ದುದ್ದೇ. ಕೆಳದಿ, ವಿಜಯನಗರ, ಶ್ರವಣ ಬೆಳಗೊಳ ಕಡೆಗಳ ಚಿತ್ರ, ಶಿಲ್ಪಗಳಲ್ಲೂ ಆ ಶೈಲಿ ಕಾಣಬಹುದು. ಆನೆ, ಜಿಂಕೆ, ಸಿಂಹ, ಎತ್ತು, ಮಂಗ ಮೊದಲಾದ ಪ್ರಾಣಿಗಳಲ್ಲಿ ನವ್ಯ ಶೈಲಿಯ ಕಲೆ ನೋಡಬಹುದು. ನವ್ಯ ಕಲೆ ಎಂದರೆ ಅರ್ಥವಾಗಬೇಕು. ನೀತಿಬೋಧನೆ ನೀಡಬೇಕು. ಏನಾದರೂ ಒಂದು ತತ್ವ, ಸತ್ವ ಇದ್ದರೆ ಒಪ್ಪಬಹುದು’’ ಎಂದು ಉತ್ತರಿಸಿದ್ದಾರೆ. (ಶಿಲ್ಪಿಸಂಕುಲ, ಪು. 103).

ಆದರೆ ದೂರದರ್ಶನದ ಸಂದರ್ಶನದಲ್ಲಿ ಇದೇ ಪ್ರಶ್ನೆಗೆ ಇನ್ನಷ್ಟು ದೀರ್ಘವಾದ ಉತ್ತರ ನೀಡಿದ್ದಾರೆ. ಅವರ ಅಭಿಪ್ರಾಯದಂತೆ ಎರಡೂ ಶೈಲಿಯ ಶಿಲ್ಪಗಳೂ ಕಷ್ಟವಾದದ್ದೇ. ನವ್ಯಕಲೆಯೂ ಒಂದು ಉತ್ತಮವಾದ ಕಲಾಪ್ರಕಾರ. ಈಗ ಪ್ರಪಂಚದಲ್ಲಿ ತುಂಬಾ ಮಹತ್ವವಿದೆ. ಜನರಿಗೆ ಅಪೇಕ್ಷೆಯಿದೆ. ಅದು ಒಳ್ಳೆ ತತ್ವ ಅನುಸರಿಸಿ, ಸಾಮಾನ್ಯ ಜನಕ್ಕೂ ಅರ್ಥವಾಗುವ ಹಾಗೆ ರಚಿಸಿದರೆ ತುಂಬಾ ಮಹತ್ವವಿದೆ ಎಂದು ಹೇಳುವ ಆಚಾರ್ಯರು ‘‘ಸಾಂಪ್ರದಾಯಿಕ ಶಿಲ್ಪಗಳನ್ನು ಶಾಸ್ತ್ರಧಾರ, ಪುರಾಣಾಧಾರ ರೀತ್ಯಾ ರಚಿಸಬೇಕು. ಆರಂಭದಿಂದ ಅಂತ್ಯದವರೆಗೂ ಅದರದೇ ರೀತಿ, ನೀತಿ ನಿಯಮ ಅನುಸರಿಸಬೇಕು. ಆಧುನಿಕ ಶಿಲ್ಪದಲ್ಲಿ ಸೂಕ್ಷ್ಮವಾಗಿ ಅರ್ಥಮಾಡಿ ಕೊಳ್ಳುವಷ್ಟು ವಿಷಯ ಸಂಗ್ರಹಣೆ ಮಾಡುತ್ತಾರೆ. ಆದರೆ ಸುಲಭದಲ್ಲಿ ಮುಗಿಸಿಬಿಡುತ್ತಾರೆ. ನವ್ಯದವರು ಶಿಲ್ಪದ ಒಟ್ಟಂದ (form) ಬಂದರೆ ಸಾಕು ನಿಲ್ಲಿಸಿಬಿಡುತ್ತಾರೆ. ಅದು ಕೆಲವರಿಗೆ ಅರ್ಥ ಆಗಬಹುದು ಕೆಲವರಿಗೆ ಇಲ್ಲ’’ ಎಂದು ಅಭಿಪ್ರಾಯ ಪಡುತ್ತಾರೆ.

**ಸುಧಾರಣೆ**

ಶಿಲ್ಪ ಕಲೆಯ ಸೂಕ್ಷ್ಮ ಕೆತ್ತನೆಗಳು ಸುಲಭವಾಗಬೇಕೆಂದು ಪರಮೇಶ್ವರಾಚಾರ್ಯರು ಕೆಲವು ಉಪಕರಣಗಳನ್ನು ಸುಧಾರಿಸಿದ್ದಾರೆ. ತಂದೆಯವರು ಬೆಳ್ಳಿ ಕೆಲಸದಲ್ಲಿ ನಕ್ಷೆ, ಸುಳುಹು, ಹೊಳಹುಗಳಿಗೆ ಬಳಸುತ್ತಿದ್ದ ಅಚ್ಚಿನಂತಹ

(ಡೈ) ಉಪಕರಣವನ್ನು ಮರದ ಶಿಲ್ಪ ಕೆತ್ತನೆಯಲ್ಲಿ ಬಳಸಬಾರದೇಕೆಂಬ ವಿಚಾರದಿಂದ ಗಟ್ಟಿ ಲೋಹದಿಂದ ಬಗೆ ಬಗೆಯ ಉಪಕರಣ ತಯಾರಿಸಿದರು. ಇದರಿಂದ ಮೂರು ಗಂಟೆಗಳ ಕಾಲದ ಕಾರ್ಯ ಅರ್ಧಗಂಟೆಯಲ್ಲಿಯೇ ಸಾಧ್ಯವಾಗುವಂತಾಗಿದ್ದು ಅಷ್ಟು ಶ್ರಮ ಕಡಿಮೆಯಾಗುವಂತಾಯಿತು. ಅದನ್ನು ರೂಪಿಸಿದಾಗ ಅಂತಹ ಜನಪ್ರಿಯತೆ ಬರಲಿಲ್ಲವಾದರೂ ಈಗ ದಕ್ಷಿಣ ಭಾರತದಲ್ಲಿ ಅನೇಕ ಕಡೆಗಳಲ್ಲಿ ಯಶಸ್ವಿಯಾಗಿ ಬಳಕೆಯಾಗುತ್ತಿದ್ದು ಆಚಾರ್ಯರ ಸಹೋದರರೊಬ್ಬರು ನೆರೆರಾಜ್ಯಗಳಿಗೆ ಹಲವಾರು ಸೆಟ್‌ಗಳನ್ನು ರೂಪಿಸಿಕೊಟ್ಟಿದ್ದು ಅಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ.

**ಕುಟುಂಬ**

ಪರಮೇಶ್ವರಾಚಾರ್ಯರು ಬೆಂಗಳೂರನ್ನು ಸೇರಿ ನೆಲೆ ನಿಂತ ಮೇಲೆ ವಿವಾಹದತ್ತ ಮನಮಾಡಿದರು. ವಾಸ್ತುಶಿಲ್ಪಿಯಾಗಿದ್ದ ಚೌದ್ರಿ ನರಸಿಂಹಾಚಾರ್ ಅವರ ಪುತ್ರಿ ಸುಸಂಸ್ಕೃತೆ ಕಮಲಮ್ಮ ಅವರನ್ನು 1956ರಲ್ಲಿ ವರಿಸಿದರು. ಈ ದಂಪತಿಗಳಿಗೆ ಇಬ್ಬರು ಪುತ್ರರು ಮುವ್ವರು ಪುತ್ರಿಯರು ಇದ್ದು ಎಲ್ಲರೂ ಕಲೆಯಲ್ಲಿ ಆಸಕ್ತಿ ಹೊಂದಿದವರಾಗಿದ್ದಾರೆ. ''ತಮ್ಮ ಮಕ್ಕಳೂ ಈ ಕಲೆಯನ್ನು ಮುಂದುವರಿಸಿಕೊಂಡು ಹೋಗಬೇಕು'' ಎಂಬುದು ಅವರ ಅಭಿಲಾಷೆ. ''ಜೀವನಕ್ಕಾಗಿ ಬೇರೆ ವೃತ್ತಿ ಮಾಡಿದರೂ ಪರವಾಗಿಲ್ಲ. ಉಪ ಕಸುಬಾಗಿ ಯಾದರೂ ಉಳಿಸಿಕೊಳ್ಳ ಬೇಕೆಂಬುದು ಅವರ ಇರಾದೆ. ಗಂಡುಮಕ್ಕಳಲ್ಲಿ ನಾಗರಾಜ್ ಕಾಮರ್ಸ್ ಪದವೀಧರ, ಮಂಜುನಾಥ್ ಎಲೆಕ್ಟ್ರಾನಿಕ್ಸ್‌ನಲ್ಲಿ ಪದವಿಯನ್ನು ಪಡೆದು ತಂದೆಯ ಮಾರ್ಗದರ್ಶನದಲ್ಲಿ ಶಿಲ್ಪಕಲೆಯಲ್ಲಿ ಮುನ್ನಡೆಯುತ್ತಿದ್ದಾರೆ. ಹೆಣ್ಣು ಮಕ್ಕಳಲ್ಲಿ ಪ್ರಭಾಮಣಿ ಶಾಲಾ ಉಪಾಧ್ಯಾಯಿನಿ, ಎಂ.ಎ., ಪದವೀಧರೆ, ಸಂಸ್ಕೃತ ಕೋವಿದೆ, ಹಾಗೂ ಸಂಪ್ರದಾಯ ಚಿತ್ರಕಲಾವಿದೆ; ಉಮಾದೇವಿ ಶಾಲಾ ಉಪಾಧ್ಯಾಯಿನಿ, ಪದವೀಧರೆ, ಹಾಗೂ ರೇಖಾಚಿತ್ರ ಮತ್ತು ಕುಶಲ ಕಲಾವಿದೆ. ಮತ್ತೊಬ್ಬ ಮಗಳು ಶಾಂತಳೆ ಪದವೀಧರೆ, ಆಕೆಗೂ ಚಿತ್ರಕಲೆಯಲ್ಲಿ ಆಸಕ್ತಿಯಿದೆ.

ಪರಮೇಶ್ವರಾಚಾರ್ಯರ ಇಚ್ಛೆ ಪೂರೈಸಿದೆ. ಅವರ ತಾತನ ಕಾಲಕ್ಕೇ ಶಿಲ್ಪಕಲೆ ನಿಲ್ಲಲಿಲ್ಲ ಪರಂಪರಾನುಗತವಾಗಿ ಮುಂದುವರಿದು ಬಂದಿದೆ. ಅಂದು ಅಜ್ಜಕಲೆ ನನ್ನ ಕಾಲಕ್ಕೇ ನಿಂತು ಹೋಗಬೇಕೆ ಎಂದು ತಲೆಯ ಮೇಲೆ ಕೈ



ಆಚಾರ್ಯ ಪರಿವಾರ

ಹೊತ್ತು ಕುಳಿತಿದ್ದರು. ಇಂದು ಅದೇ ಮೊಮ್ಮಗ ಅದೇ ಸಂಪ್ರದಾಯ ಕಲೆಯನ್ನು ತಲೆಯ ಮೇಲೆ ಹೊತ್ತು ಮೆರಸುತ್ತಿದ್ದಾರೆ. ಅಂದು ಕೇವಲ ಲೋಯರ್ ಸೆಕಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಆಚಾರ್ಯರು ಇಂದು ಖ್ಯಾತ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದಾರೆ. ಅಂದು ಗ್ರಾಮಾಂತರದಲ್ಲಿ ಬೆಳೆದ ಶಿಲ್ಪವರ್ಯರು ಇಂದು ದೇಶ-ವಿದೇಶಗಳಲ್ಲಿ ಖ್ಯಾತರಾಗಿದ್ದಾರೆ.

ಪರಮೇಶ್ವರಾಚಾರ್ಯರಿಗೆ ಶಿಲ್ಪಕಲೆಯಿಂದಾಗಿ ಹಣ, ಕೀರ್ತಿ, ಸಂತೃಪ್ತಿ, ಆನಂದ, ಭರವಸೆ, ಜೀವನೋತ್ಸಾಹ, ಸಾರ್ಥಕತೆ, ಪ್ರಶಸ್ತಿ, ಗೌರವ ಇತ್ಯಾದಿಯಾಗಿ ಏನೆಲ್ಲ ಸಂದಿವೆ.

"ಓ ಶಿಲ್ಪಿ! ನೀನಲಾ ಬ್ರಹ್ಮ
ಏನೈ ಪುಣ್ಯ".

## ಆಕರಗಳು


ತಿಪ್ಪೇಸ್ವಾಮಿ ಪಿ. ಆರ್., 'ಶಿಲ್ಪ ಸಂಕುಲ', ಬೆಂಗಳೂರು, 1996

ಶಾಸ್ತ್ರೀ ಬಿ. ವಿ. ಕೆ., 'ಚತುರ ಶಿಲ್ಪಿ ಪರಮೇಶ್ವರಾಚಾರ್ಯ' ಸುಧಾ 30-5-1971

ಶರತ್ ಕಲ್ಕೋಡ್., 'ಶಿಲ್ಪಿ ಸಿ. ಪರಮೇಶ್ವರಾಚಾರ್ಯ' ಸುಧಾ, 17-11-1996

ಸಂಯೋಜಿತ ಪ್ರಕಾಶನ, 'ಸಂಯೋಜನೆ', ಬೆಂಗಳೂರು, 1987

Riti, M.D., 'The excels in wood carving', Times of India, Banglaore 22-6-1998

ರಾಜಗೋಪಾಲ್, ಕ. ವೆಂ., (ಸಂ), ತುಳುವರ ಆಚರಣೆಯಲ್ಲಿ ಕಲಾವಂತಿಕೆ', ಬೆಂಗಳೂರು, 1989

ಆಕಾಶವಾಣಿ ಸಂದರ್ಶನ, (ಸಂದರ್ಶಿಸಿದವರು) ಶ್ರೀಮತಿ ಅಪರ್ಣ, 14-7-1997

ದೂರದರ್ಶನ ಸಂದರ್ಶನ (ಸಂದರ್ಶಿಸಿದವರು) ಶ್ರೀಮತಿ ರೇಖಾರಾಣಿ, ಮಾರ್ಚಿ 1997

ಅವಲೋಕನ ಕಾರ್ಯಕ್ರಮ ಅಕ್ಟೋಬರ್ 1996